CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೧೧, ೨೦೦೩ (ಮಾರ್ಗಶಿರ ೨೦, ಶಕ ವರ್ಷ ೧೯೨೫) | ಸಂಚಿಕೆ ೪೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಸಿ.ಆ.ಸು. ಇಲಾಖೆಯ ಇ-ಗವರ್ನೆನ್ಸ್ (ಅ.ಸು) ವಿಭಾಗದ ಅಧೀನದಲ್ಲಿರುವ ಮುಖ್ಯವಾಹಿನಿ ಯೋಜನೆಯನ್ನು ಮಾಹಿತಿ ತಂತ್ರಜ್ಞಾನ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 2003 ದಿನಾಂಕ: 6.3.2003.

2. ಮುಖ್ಯ ಮಂತ್ರಿಗಳ ಸಚಿವಾಲಯದ ಕಡತ ಸಂಖ್ಯೆ: ಸಿಎಂ/ ಜೆಎಸ್/35/2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 6.3.2003ರ ಸರ್ಕಾರಿ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ ಇ-ಗವರ್ನೆನ್ಸ್ (ಅ.ಸು) ಹುದ್ದೆಯನ್ನು ಸೃಜಿಸಲಾಗಿರುತ್ತದೆ. ಈ ಆದೇಶದಲ್ಲಿ ಈ ಅಧಿಕಾರಿಗಳು ನಿರ್ವಹಿಸುವ ಕಾರ್ಯವ್ಯಾಪ್ತಿಯನ್ನು ವಿವರಿಸಲಾಗಿರುತ್ತದೆ. ಈ ಕಾರ್ಯಗಳಲ್ಲಿ ಮುಖ್ಯಮಂತ್ರಿಯವರ ಕಾರ್ಯಾಲಯಕ್ಕೆ ಸಂಬಂಧಿಸಿದ ಮುಖ್ಯವಾಹಿನಿ ಯೋಜನೆಯು ಒಳಗೊಂಡಿರುತ್ತದೆ.

ಈ ಯೋಜನೆಯನ್ನು ಸಮರ್ಪಕವಾಗಿ ನಿರ್ವಹಿಸುವ ಸಲುವಾಗಿ ಇದನ್ನು ಕಾರ್ಯದರ್ಶಿ, ಇ-ಗವರ್ನೆನ್ಸ್ (ಅ.ಸು) ಇವರ ಕಾರ್ಯವ್ಯಾಪ್ತಿಯಿಂದ ಬೇರ್ಪಡಿಸಿ ಮಾಹಿತಿ ತಂತ್ರಜ್ಞಾನ ಇಲಾಖೆಯ ಅಧೀನಕ್ಕೆ ಒಳಪಡಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 86 ಸಸಿವಿ 2003, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2003**

ಪ್ರಸ್ತುತ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ, ಇ-ಗವರ್ನೆನ್ಸ್ (ಅ.ಸು) ಇವರ ಅಧೀನದಲ್ಲಿರುವ ಮುಖ್ಯವಾಹಿನಿ ಯೋಜನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ಮಾಹಿತಿ ತಂತ್ರಜ್ಞಾನ ಇಲಾಖೆಯ ಅಧೀನಕ್ಕೆ ವರ್ಗಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿಆರ್. 1455 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

### ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ನಿಬಂಧಕರ ಹುದ್ದೆಯನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 56 ಆರ್‌ಎಂಇ 91 ದಿನಾಂಕ: 13.11.1992

2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 5 ಆರ್‌ಎಂಇ 2003, ದಿನಾಂಕ: 14.02.2003

3. ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ1: ಸಿಆರ್-62: 2000-01, ದಿನಾಂಕ: 12.6.2003.

**ಪ್ರಸ್ತಾವನೆ:**

ಮೇಲೆ ಉಲ್ಲೇಖ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿ ತಾತ್ಕಾಲಿಕವಾಗಿ ಒಂದು ನಿಬಂಧಕರ ಹುದ್ದೆಯನ್ನು ಸೃಜಿಸಿ ದಿನಾಂಕ: 13.11.1992 ರಿಂದ 12.11.1994 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ನ್ಯಾಯಾಧಿಕರಣದ ಹಿತದೃಷ್ಟಿಯಿಂದ ಹಾಗೂ ನ್ಯಾಯಾಧಿಕರಣದ ಮುಂದೆ ವಿಚಾರಣೆಗೆ ಬರುವ ಪ್ರಕರಣಗಳ ವಿಷಯದಲ್ಲಿ ರಾಜ್ಯ ಮಟ್ಟದ ಹಿರಿಯ ಅಧಿಕಾರಿಗಳ ಜೊತೆಯಲ್ಲಿ ಸಂಪರ್ಕಿಸಲು ಮತ್ತು ನ್ಯಾಯಾಧಿಕರಣದ ಸದಸ್ಯರುಗಳ ನಡುವೆ ಒಳ್ಳೆಯ ವಾತಾವರಣವನ್ನು ಕಲ್ಪಿಸುವ ಸಲುವಾಗಿ ಹಾಗೂ ನ್ಯಾಯಾಧಿಕರಣದ ದೈನಂದಿನ ಕೆಲಸ ಕಾರ್ಯಗಳನ್ನು ಸುಗಮವಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸಲು ನಿಬಂಧಕರ ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಉಲ್ಲೇಖ (2)ರ ಆದೇಶದನ್ವಯ ಸದರಿ ಹುದ್ದೆಯನ್ನು ದಿನಾಂಕ: 12.11.2002 ರಿಂದ 31.3.2003ರ ವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು.

ಮೇಲೆ ಉಲ್ಲೇಖ (3)ರಲ್ಲಿ ಓದಲಾಗಿರುವ ಪತ್ರದ ಅನ್ವಯ ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 56 ಆರ್‌ಎಂಇ 91, ದಿನಾಂಕ: 13.11.1992ರ ಅನ್ವಯ ತಾತ್ಕಾಲಿಕವಾಗಿ ಸೃಜಿಸಿಕಾಲಕಾಲಕ್ಕೆ ಮುಂದುವರೆಸಲಾಗಿರುವ ನಿಬಂಧಕರ ಹುದ್ದೆಯನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ: 27.9.1979ರ ಅನ್ವಯ ಖಾಯಂ ಆಗಿ ಪರಿವರ್ತಿಸಬೇಕೆಂದು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 32 ಆರ್‌ಎಂಇ 2003, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2003**

ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇಲ್ಲಿನ ನಿಬಂಧಕರ ಹುದ್ದೆಯನ್ನು ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಆಡಳಿತ ಸೇವೆ ಗ್ರೂಪ್-1 (ಹಿರಿಯ ಶ್ರೇಣಿ)ರ ವೇತನ ಶ್ರೇಣಿ 10620-14960 ರಡಿಯಲ್ಲಿ ಮುಂದುವರೆಸಿ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ: 27.9.1979ರ ಅನ್ವಯ ಸರ್ಕಾರವು ಪರಿಶೀಲಿಸಿ ಖಾಯಂಗೊಳಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ: 1001: ವೆಚ್ಚ-7: 2003, ದಿನಾಂಕ: 5.11.2003 ರಲ್ಲಿ ನೀಡಿರುವ ಸಹಮತಿಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಬಿ. ಬೆಳಗಾವಿ**

ಪಿಆರ್. 1457

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಕಂದಾಯ ಇಲಾಖೆ, (ಕೆಎಟಿ).

## ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮವನ್ನು (ಕೆಎಫ್‌ಐಡಿಸಿ) ಮುಚ್ಚುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮವು 1968ರಲ್ಲಿ ಸಾರ್ವಜನಿಕ ನಿಯಮಿತ ಕಂಪನಿಯಾಗಿ ಆರಂಭವಾಯಿತು. ಕರ್ನಾಟಕ ಸರ್ಕಾರವು 1974ರಲ್ಲಿ ಶೇಕಡ 51.2ರಷ್ಟು ಶೇರು ಬಂಡವಾಳವನ್ನು ಹೂಡುವ ಮೂಲಕ ಈ ನಿಗಮವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿತು. ಇದಾದ ನಂತರ ಕೆಎಫ್‌ಐಡಿಸಿಯಲ್ಲಿ ಸರ್ಕಾರದ ಬಂಡವಾಳ ಹೂಡಿಕೆ ಮತ್ತಷ್ಟು ಹೆಚ್ಚಾಗಿದೆ. ಹಾಲಿ ನಿಗಮದ ಶೇರು ಬಂಡವಾಳವಾದ 102.8 ಲಕ್ಷ ರೂ.ಗಳಲ್ಲಿ ಶೇಕಡ 88 ರಷ್ಟು ಅಂದರೆ 89,99,900/- ರೂ.ಗಳು ರಾಜ್ಯ ಸರ್ಕಾರದ ಬಂಡವಾಳವಾಗಿರುತ್ತದೆ. ಖಾಸಗಿ ಶೇರುದಾರರು ಶೇಕಡ 12ರಷ್ಟು ಶೇರು ಬಂಡವಾಳವನ್ನು ಹೊಂದಿದ್ದಾರೆ. ನಿಗಮದ ಅಧಿಕೃತ ಶೇರು ಬಂಡವಾಳ 200 ಲಕ್ಷ ರೂ.ಗಳಾಗಿರುತ್ತದೆ.

ಚಲನಚಿತ್ರ ವಾಣಿಜ್ಯ ಮತ್ತು ಉದ್ಯಮದಲ್ಲಿ ತೊಡಗಿಕೊಳ್ಳುವುದು ನಿಗಮದ ಮೂಲ ಉದ್ದೇಶವಾಗಿರುತ್ತದೆ. ಅಂತೆಯೆ ಚಲನಚಿತ್ರ ತಯಾರಿಕೆ, ಚಿತ್ರಮಂದಿರಗಳ ನಿರ್ಮಾಣಕ್ಕೆ ಧನಸಹಾಯ ಒದಗಿಸುವುದು, ಚಿತ್ರಮಂದಿರ, ಸ್ಟುಡಿಯೋ, ಸಂಸ್ಕರಣ ಕೇಂದ್ರಗಳನ್ನು ಸ್ಥಾಪಿಸುವುದು ಮತ್ತು ಅವುಗಳನ್ನು ನಡೆಸುವುದು, ಚಲನಚಿತ್ರೋತ್ಸವಗಳನ್ನು ಸಂಘಟಿಸುವುದು, ಟೆಲಿವಿಷನ್ ಕಾರ್ಯಕ್ರಮಗಳನ್ನು ತಯಾರಿಸುವುದು ಇತ್ಯಾದಿ ಸಿನಿಮಾ ಉದ್ಯಮಕ್ಕೆ ಪೂರಕವಾದ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ಕೆಎಫ್‌ಐಡಿಸಿಯ ಆಶಯವಾಗಿರುತ್ತದೆ. ಸಿನಿಮಾ ಮತ್ತು ಟೆಲಿವಿಷನ್‌ಗೆ ಸಂಬಂಧಿಸಿದಂತೆ ತರಬೇತಿ ನೀಡುವ ಸಂಸ್ಥೆಗಳ ಸ್ಥಾಪನೆ ಮತ್ತು ನಿರ್ವಹಣೆ ಹಾಗೂ ಇವುಗಳಿಗೆ ಪ್ರೋತ್ಸಾಹ ನೀಡುವುದು ಇತರೆ ಉದ್ದೇಶಗಳಾಗಿವೆ.

ಆದರೆ, ಇತ್ತೀಚಿನ ವರ್ಷಗಳಲ್ಲಿ ನಿಗಮದ ಕಾರ್ಯಚಟುವಟಿಕೆಗಳ ಪ್ರಗತಿ ಪರಿಶೀಲನೆ ಮಾಡಿದರೆ ಈ ಉದ್ದೇಶಗಳ ಈಡೇರಿಕೆಯಲ್ಲಿ ನಿಗಮವು ಸಂಪೂರ್ಣವಾಗಿ ವಿಫಲವಾಗಿರುವುದು ಕಂಡು ಬರುತ್ತದೆ. ಸದ್ಯಕ್ಕೆ ವಿವಿಧ ಸರ್ಕಾರಿ ಇಲಾಖೆಗಳಿಗೆ ಸಾಕ್ಷ್ಯಚಿತ್ರಗಳನ್ನು ನೋಂದಾಯಿತ ನಿರ್ದೇಶಕರುಗಳ ಮೂಲಕ ತಯಾರಿಸಿಕೊಡುವುದು ಮಾತ್ರ ನಿಗಮದ ಪ್ರಮುಖ ಆದಾಯ ಚಟುವಟಿಕೆಯಾಗಿರುತ್ತದೆ. ಬೆಂಗಳೂರಿನ ಜಯನಗರ ವಾಣಿಜ್ಯ ಸಂಕೀರ್ಣದಲ್ಲಿರುವ ಪುಟ್ಟಣ್ಣ ಕಣಗಾಲ್ ಚಿತ್ರಮಂದಿರವನ್ನು ಬೆಂಗಳೂರು ಮಹಾನಗರ ಪಾಲಿಕೆಯಿಂದ ಗುತ್ತಿಗೆಗೆ ಪಡೆದು ಕನ್ನಡ ಚಲನಚಿತ್ರಗಳನ್ನು ಮಾತ್ರ ಪ್ರದರ್ಶಿಸುತ್ತಿರುವುದು ನಿಗಮದ ಇನ್ನೊಂದು ಚಟುವಟಿಕೆಯಾಗಿದೆ. ಸಧ್ಯಕ್ಕೆ ನಿಗಮದಲ್ಲಿರುವ ಕ್ಯಾಮೆರಾವನ್ನು ಹೊರತುಪಡಿಸಿ. ಇತರೆ ಉಪಕರಣಗಳು ಹಳೆಯ ತಂತ್ರಜ್ಞಾನದವುಗಳಾಗಿದ್ದು ಚಲನಚಿತ್ರ ಉದ್ಯಮದ ಉಪಯೋಗಕ್ಕೆ ನೆರವಾಗುತ್ತಿಲ್ಲ. ಪುಟ್ಟಣ್ಣ ಚಿತ್ರಮಂದಿರವು ಸಹ ಸೂಕ್ತ ನಿರ್ವಹಣೆಯಿಲ್ಲದೆ ದುಸ್ಥಿತಿಯಲ್ಲಿರುತ್ತದೆ.

ಬೆಂಗಳೂರು ಸಮೀಪದ ಹೆಸರಘಟ್ಟದಲ್ಲಿ 347 ಎಕರೆ 12 ಗುಂಟೆ ಜಮೀನನ್ನು ಕೆಎಫ್‌ಐಡಿಸಿಯು 99 ವರ್ಷಗಳ ಅವಧಿಗೆ ಸರ್ಕಾರದಿಂದ ಗುತ್ತಿಗೆಗೆ ಪಡೆದಿರುತ್ತದೆ. (ಸರ್ಕಾರಿ ಆದೇಶ ಸಂಖ್ಯೆ ಎ.ಎಫ್ 21 ವಿಎಲ್‌ಎಸ್ 71 ದಿನಾಂಕ: 28.1.1972) ಈ ಜಮೀನು ದೊಡ್ಡಬಳ್ಳಾಪುರ ತಾಲ್ಲೂಕು, ಮದುರೆ ಹೋಬಳಿಯ ಕೋಡಿಹಳ್ಳಿ ಗ್ರಾಮಕ್ಕೆ ಸೇರಿರುತ್ತದೆ. ಈ ಜಮೀನನ್ನು 'ಚಿತ್ರನಗರಿ' ಸ್ಥಾಪಿಸುವ ಸಲುವಾಗಿ ಗುತ್ತಿಗೆಗೆ ಪಡೆಯಲಾಗಿರುತ್ತದೆ. ಚಿತ್ರನಗರಿಯ ಮುಖ್ಯ ಯೋಜನಾ ನಕ್ಷೆಯನ್ನು ಸಿದ್ಧಪಡಿಸಿದ್ದರೂ ಹಾಗೂ ಈ ಸಂಬಂಧ ಸಣ್ಣಪುಟ್ಟ ಭೂವಿನ್ಯಾಸ ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದರೂ ಚಿತ್ರನಗರಿಯ ಪರಿಕಲ್ಪನೆ ಇನ್ನೂ ನನಸಾಗಿಲ್ಲ. ಕೆಎಫ್‌ಐಡಿಸಿಯು ಈ ಜಮೀನಿಗೆ ವಾರ್ಷಿಕ 5,209/- ರೂ.ಗಳ ಗುತ್ತಿಗೆ ಹಣವನ್ನು ನೀಡುತ್ತಿದೆ.

ಕೆಎಫ್‌ಐಡಿಸಿಯು ಈ ಜಮೀನಿನಲ್ಲಿ 45 ಎಕರೆಯನ್ನು ಉಪ ಗುತ್ತಿಗೆ (ಸಬ್ ಲೀಸ್) ಮೇಲೆ ಕೊಟ್ಟಿದ್ದಾರೆ. ಕಂಪನಿಯು ಯಾವುದೇ ಲಾಭವನ್ನು ಗಳಿಸದೆ ನಿರಂತರವಾಗಿ ನಷ್ಟವನ್ನು ಅನುಭವಿಸುತ್ತದೆ.

ಸಾರ್ವಜನಿಕ ಉದ್ದಿಮೆಗಳ ಪುನರ್‌ರಚನಾ ಆಯೋಗವು ಅಧ್ಯಯನದ ನಂತರ ಕಂಪನಿಯನ್ನು ಮುಚ್ಚುವ ಶಿಫಾರಸ್ಸಿನ ವರದಿಯನ್ನು ಸಲ್ಲಿಸಿತು. ಉನ್ನತ ಮಟ್ಟದ ಸಮಿತಿಯು ಈ ಆಯೋಗದ ಶಿಫಾರಸ್ಸನ್ನು ಒಪ್ಪಿ ಸ್ವಯಂ ಸಮಾಪನಕ್ಕೆ ಮತ್ತು ಎಲ್ಲಾ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ಕಲ್ಪಿಸಲು ಶಿಫಾರಸ್ಸು ಮಾಡಿದೆ.

ಸಚಿವ ಸಂಪುಟವು ದಿನಾಂಕ: 16.10.2003ರಂದು ನಡೆದ ಸಭೆಯಲ್ಲಿ ಉನ್ನತ ಮಟ್ಟದ ಸಭೆಯ ಶಿಫಾರಸ್ಸನ್ನು ಅನುಮೋದನೆ ಮಾಡಿತು. ಆದುದರಿಂದ ಆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 73 ಎಆರ್‌ಯು 2003, ಬೆಂಗಳೂರು ದಿನಾಂಕ: 13ನೇ ನವೆಂಬರ್ 2003.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಲಾಗಿದೆ.

1. ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮ (ಕೆಎಫ್‌ಐಡಿಸಿ)ವನ್ನು ಕಾನೂನಿನ ಪ್ರಕ್ರಿಯೆಗಳಿಗನುಸಾರವಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಮುಚ್ಚುವುದು ಮತ್ತು ಕೆಎಫ್‌ಐಡಿಸಿಯ ಎಲ್ಲ ಸಿಬ್ಬಂದಿಗಳಿಗೆ ಸ್ವಯಂ ನಿವೃತ್ತಿ ಸೌಲಭ್ಯವನ್ನು ವಿಸ್ತರಿಸುವುದು.
2. ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮದ ಎಲ್ಲಾ 34 ಸಿಬ್ಬಂದಿಗಳಿಗೆ ಸ್ವಯಂ ನಿವೃತ್ತಿ ಸೌಲಭ್ಯವನ್ನು ಅನುಷ್ಠಾನಗೊಳಿಸಲು ಅಗತ್ಯವಾದ 121 ಲಕ್ಷ ರೂ.ಗಳ ಸಾಲವನ್ನು ಕೆಎಫ್‌ಐಡಿಸಿಗೆ ಒದಗಿಸುವುದು. ಈ ಸಾಲಗಳಿಗೆ ಆರ್ಥಿಕ ಇಲಾಖೆಯು ನಿಗದಿಪಡಿಸುವ ಷರತ್ತು ಮತ್ತು ನಿಯಮಗಳಿಗೆ ಈ ಮೊತ್ತವು ಬದ್ಧವಾಗಿರುತ್ತದೆ.
3. ಸ್ವಯಂ ನಿವೃತ್ತಿ ಸೌಲಭ್ಯವನ್ನು ಒಪ್ಪಿಕೊಳ್ಳದ ಎಲ್ಲ ನೌಕರರನ್ನು ಕಾನೂನಿನ ಪ್ರಕಾರ ಸೇವೆಯಿಂದ ವಜಾಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಂ. ವಸಂತ

ಪಿಆರ್. 1458

ಆಡಳಿತಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಡಿಡಿಪಿಇಆರ್.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 395 ಹೆಚ್‌ಎಸ್‌ಹೆಚ್ 2003 ಬೆಂಗಳೂರು, ದಿನಾಂಕ: 15ನೇ ನವೆಂಬರ್ 2003**

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 16.8.2002 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ: 27/2000-01ರ ಪಟ್ಟಿಯಲ್ಲಿ ಆಯ್ಕೆಯಾದ ಮನೋರೋಗ ತಜ್ಞ ವೈದ್ಯರನ್ನು (ಸೈಕಿಯಾಟ್ರಿಸ್ಟ್) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ರೂ. 7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯು ಅಭ್ಯರ್ಥಿಯ ವೈದ್ಯಕೀಯ ದೃಢತೆ ಪ್ರಮಾಣ ಪತ್ರ, ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ಮತ್ತು ಜಾತಿ ಹಾಗೂ ಆದಾಯ ಸಿಂಧುತ್ವ ಪ್ರಮಾಣ ಪತ್ರ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೋಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 18(3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಅಧಿಕಾರಿ: ಜಿಲ್ಲಾ ಸರ್ಜನ್‌ಗಳ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು.

5. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರು ಪಡಿಸಬೇಕು.

6. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ.

ಅಭ್ಯರ್ಥಿಯ ಜೇಷ್ಠತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ದತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ನೇಮಕಾತಿ ಮಾಡಿರುವ ಸ್ಥಳದಲ್ಲಿ ಯಾವುದೇ ಕಾರಣಕ್ಕಾಗಲೀ ಹುದ್ದೆ ಖಾಲಿ ಇಲ್ಲದಿದ್ದ ಪಕ್ಷದಲ್ಲಿ ಸದರಿ ಅಭ್ಯರ್ಥಿಗಳನ್ನು ನೇಮಕಾತಿ ಮಾಡಿರುವ ಜಿಲ್ಲೆಯ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರೊಂದಿಗೆ ಸಮಾಲೋಚಿಸಿ, ಆ ಜಿಲ್ಲೆಯಲ್ಲಿಯೇ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಬದಲಿ ನೇಮಕಾತಿ ಆದೇಶ ನೀಡಲು ಅಧಿಕಾರ ನೀಡಲಾಗಿದೆ. ಇಂತಹ ಪ್ರಕರಣಗಳಲ್ಲಿ ಕೈಗೊಂಡ ಕ್ರಮದ ಕುರಿತು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 395 ಹೆಚ್‌ಎಸ್‌ಹೆಚ್ 2003 ದಿನಾಂಕ: 15ನೇ ನವೆಂಬರ್ 2003ಕ್ಕೆ**

**ಅನುಬಂಧ**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಹುಟ್ಟಿದ ದಿನಾಂಕ | ನೇಮಕಾತಿ ನೀಡುವ ಸ್ಥಳ |
|---|---|---|---|
| 1 | 2 | 3 | 4 |
| 1. | ಡಾ: ಪದ್ಮಿನಿ ಸಿ.<br>ತಂದೆ: ಆರ್. ಚಂದ್ರಶೇಖರನ್<br>ನಂ. 822, 11ನೇ ಮುಖ್ಯ ರಸ್ತೆ,<br>ಹೆಚ್.ಎ.ಎಲ್. 2ನೇ ಘಟಕ,<br>ಬೆಂಗಳೂರು-560008. | 29.05.1965 | ಜಿಲ್ಲಾ ಆಸ್ಪತ್ರೆ ಚಾಮರಾಜನಗರ |
| 2. | ಡಾ: ಮೋಹನ್ ರೆಡ್ಡಿ ಎಂ.<br>ತಂದೆ: ವೆಂಕಟರೆಡ್ಡಿ ಎಂ.<br>ಮನೆ ಸಂ: 813, ಹೆಚ್.ಎ.ಎಲ್. 3ನೇ ಹಂತ, 1ನೇ ಬ್ಲಾಕ್, 2ನೇ ಮುಖ್ಯ ರಸ್ತೆ, ನ್ಯೂ ತಿಪ್ಪಸಂದ್ರ, ಬೆಂಗಳೂರು-560075 | 09.10.1969 | ಜಿಲ್ಲಾ ಆಸ್ಪತ್ರೆ, ಕೋಲಾರ. |

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿಆರ್. 1459 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 285 ಡಿಪಿಐ 2003 ಬೆಂಗಳೂರು, ದಿನಾಂಕ: 15ನೇ ನವೆಂಬರ್ 2003**

ದಿನಾಂಕ: 1.1.2003 ರಲ್ಲಿ ಇರುವಂತೆ, ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾಪಟ್ಟಿಯನ್ನು ತಯಾರಿಸಿ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ. ಈ ಪಟ್ಟಿಯಲ್ಲಿ ಬಾಧಿತರಾದ ಅಧಿಕಾರಿಗಳು, ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ ತಮ್ಮ ಆಕ್ಷೇಪಣೆಗಳನ್ನು ಹಾಗೂ ಸಲಹೆಗಳಿದ್ದಲ್ಲಿ ಸಂಬಂಧಿಸಿದ ದಾಖಲೆಗಳೊಡನೆ ನೇರವಾಗಿ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಯವರಿಗೆ ಸಲ್ಲಿಸತಕ್ಕದ್ದು. ನಿಗದಿತ ಗಡುವು ಮುಗಿದ ನಂತರ ಬಂದಂತಹ ಆಕ್ಷೇಪಣೆಗಳು: ಸಲಹೆಗಳನ್ನು ಪರಿಶೀಲಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್. ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

(ಸೇವೆಗಳು-1,2).

## ಅನುಬಂಧ

### ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹನಿರ್ದೇಶಕರು ವೃಂದದ ಹುದ್ದೆಗಳಲ್ಲಿ ದಿನಾಂಕ: 1.1.2003 ರಲ್ಲಿ ಕಾರ್ಯನಿರ್ವಹಿಸುತ್ತಿರುವವರ ತಾತ್ಕಾಲಿಕ ಜೇಷ್ಠತಾಪಟ್ಟಿ

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆಸೇರಿದ ದಿನಾಂಕ | ಸಹನಿರ್ದೇಶಕರಾಗಿ ಬಡ್ತಿ ಹೊಂದಿದ ದಿನಾಂಕ |
|---|---|---|---|---|
| | **ಶ್ರೀ: ಶ್ರೀಮತಿ** | | | |
| 1. | ಎ. ಶ್ರೀಕಾಂತ | 01.05.1947 | 01.08.1973 | 10.09.1997 |
| 2. | ಕೆ. ರಾಮಯ್ಯ | 25.06.1945 | 09.07.1973 | 27.04.2000 |
| 3. | ಓ. ಕೆ. ಜಾನಕಿ | 06.04.1947 | 01.07.1973 | 27.04.2000 |
| 4. | ಎಂ. ಡಿ. ಗಾಯಿತ್ರಿದೇವಿದತ್ | 19.12.1949 | 07.07.1973 | 27.04.2000 |
| 5. | ಎನ್. ಕೃಷ್ಣಮೂರ್ತಿ | 15.01.1947 | 04.07.1973 | 26.07.2000 |
| 6. | ಶೋಹೆಬ್ ಹಸನ್ | 14.01.1946 | 07.07.1973 | 26.07.2000 |
| 7. | ಕೆ. ಎನ್. ಅಶೋಕ್‌ಕುಮಾರ್ | 04.06.1949 | 06.07.1973 | 13.06.2001 |
| 8. | ಕೆ. ಎನ್. ಶಂಕರನಾರಾಯಣಭಟ್ | 12.12.1945 | 20.07.1973 | 13.06.2001 |
| 9. | ಎ. ಎಸ್. ಬಳಗನೂರು | 02.04.1947 | 12.07.1973 | 13.06.2001 |
| 10. | ಕೆ. ಶ್ರೀಕಂಠೇಶ್ವರ್ | 20.11.1949 | 04.07.1983 | 06.09.2001 |
| 11. | ಪಿ. ಈಶ್ವರಭಟ್ | 04.01.1950 | 07.07.1973 | 20.09.2002 |
| 12. | ಎ. ಎ. ಕುಟಿನೋ | 29.11.1949 | 16.07.1973 | 20.09.2002 |
| 13. | ಹೆಚ್. ಎಸ್. ಜಯಶಂಕರಮೂರ್ತಿ | 06.06.1945 | 09.08.1973 | 20.09.2002 |
| 14. | ಚಿದ್ರಶಂಕರಯ್ಯಸ್ವಾಮಿ | 22.07.1950 | 09.07.1973 | 20.09.2002 |
| 15. | ಎಂ. ವಿ. ಪಾರ್ಥಸಾರಥಿರಾಜು | 10.11.1946 | 07.07.1973 | 20.09.2002 |

**ಎಫ್. ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿಆರ್. 1460

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮೋಘಾ ಮಂಡಲ ಪಂಚಾಯಿತಿ ತಾಲ್ಲೂಕು ಪಂಚಾಯತಿ ಚಿಂಚೋಳಿ ಇಲ್ಲಿ ಜವಾಹರ್ ರೋಜಗಾರ್ ಯೋಜನೆಯಲ್ಲಿ ನಡೆದಿರುವ ಅವ್ಯವಹಾರದ ಕುರಿತು ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 109 ವಿಸೇಬಿ 96 ದಿನಾಂಕ: 22.5.1996.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 109 ವಿಸೇಬಿ 96 ದಿನಾಂಕ: 06.03.2003.
3. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 5330/03 ರಲ್ಲಿ ನೀಡಿರುವ ಆದೇಶ ದಿನಾಂಕ: 29 ಜುಲೈ 2003.
4. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 6169/2003 ರಲ್ಲಿ ನೀಡಿರುವ ಆದೇಶ ದಿನಾಂಕ: 19 ಆಗಸ್ಟ್ 2003.

**ಪ್ರಸ್ತಾವನೆ:**

ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಶ್ರೀ ರವಿ ಆನಂದರಾವ್, ಚಂದ್ರಶೇಖರಸ್ವಾಮಿ, ಹಿಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಚಿಂಚೋಳಿ, ಇಲ್ಲಿ ಜವಾಹರ್ ರೋಜಗಾರ್ ಯೋಜನೆಯಲ್ಲಿ ನಡೆದಿರುವ ಅವ್ಯವಹಾರದ ವಿರುದ್ಧ ಸರ್ಕಾರದ ಹಣ ದುರುಪಯೋಗದ ಆಪಾದನೆ ಮೇಲೆ ಇಲಾಖಾ ವಿಚಾರಣೆ ನಡೆಸಲು ಗುಲ್ಬರ್ಗಾ ವಿಭಾಗದ ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರನ್ನು ಈ ಪ್ರಕರಣದ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು. ಅದರಂತೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಲಾದ ವಿಚಾರಣಾ ವರದಿಯಲ್ಲಿ ಸದರಿ ಆಪಾದಿತ ಅಧಿಕಾರಿಗಳ ವಿರುದ್ಧ ಮಾಡಲಾದ ಹಣ ದುರುಪಯೋಗದ ಆರೋಪ ಸಾಬೀತಾಗಿರುವುದಾಗಿ ಅಭಿಪ್ರಾಯವನ್ನು ನೀಡಿದ್ದು ಈ ಬಗ್ಗೆ ಪರಿಗಣಿಸಿ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಆಪಾದಿತ ನೌಕರರಾದ ಶ್ರೀ ರವಿ ಆನಂದರಾವ್, ಕಿರಿಯ ಇಂಜಿನಿಯರ್ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ-8(III) ರನ್ವಯ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ. 37,998-00 (ರೂಪಾಯಿ ಮೂವತ್ತೇಳು ಸಾವಿರದ ಒಂಭೈನೂರ ತೊಂಭತ್ತೆಂಟು ಮಾತ್ರ) ಗಳನ್ನು ಬಡ್ಡಿ ಸಹಿತವಾಗಿ ವಸೂಲು ಮಾಡುವುದರೊಂದಿಗೆ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಶ್ರೀ ಚಂದ್ರಶೇಖರಸ್ವಾಮಿ, ಹಿಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ಚಿಂಚೋಳಿ ಇವರು ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರಕ್ಕೆ ಉಂಟಾಗಿರುವ ನಷ್ಟ ಹಣ ರೂ. 16,321-00 (ರೂಪಾಯಿ ಹದಿನಾರು ಸಾವಿರದ ಮೂರುನೂರ ಇಪ್ಪತ್ತೊಂದು ಮಾತ್ರ) ಗಳನ್ನು ಬಡ್ಡಿ ಸಮೇತವಾಗಿ ವಸೂಲು ಮಾಡುವುದರ ಸಂಗಡ ಇವರ ಮುಂದಿನ ಒಂದು ವಾರ್ಷಿಕ ವೇತನ

ಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಈ ಆದೇಶದ ವಿರುದ್ಧ ಸದರಿ ಆಪಾದಿತ ನೌಕರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಮೇಲ್ಮನವಿ ಸಲ್ಲಿಸಿದ್ದು, ವಿಚಾರಣೆ ಮಾಡಿದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಓದಲಾದ ಕ್ರಮ ಸಂಖ್ಯೆ (3) ಮತ್ತು (4) ರಲ್ಲಿ ನೀಡಿರುವ ಆದೇಶದನ್ವಯ, ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ವಿಚಾರಣಾ ಅವಧಿಯಲ್ಲಿ ಆಪಾದಿತರ ವಿರುದ್ಧ ಮಾಡಲಾದ ಆರೋಪಗಳಿಗೆ ಸಂಬಂಧಿಸಿದಂತೆ, ಯಾವುದೇ ಸಾಕ್ಷಿಗಳನ್ನು ವಿಚಾರಿಸದೆ, ದಾಖಲೆಗಳನ್ನು ಪರಿಶೀಲಿಸದೆ ಆರೋಪಗಳು ಸಾಬೀತಾಗಿರುವುದಾಗಿ ನಿರ್ಧರಿಸಿರುವುದರಿಂದ, ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ ನಿಯಮ-11ನ್ನು ಪಾಲಿಸಿರುವುದಿಲ್ಲವೆಂಬ ಆಧಾರದ ಮೇಲೆ ಸದರಿ ಆದೇಶವನ್ನು ನ್ಯಾಯ ಮಂಡಳಿಯು ತಳ್ಳಿಹಾಕಿರುತ್ತದೆ (Quashed). ಹಾಗೂ. ಈ ಪ್ರಕರಣದ ಇಲಾಖಾ ವಿಚಾರಣೆಯಲ್ಲಿ, ಯಾವ ಹಂತದಲ್ಲಿ ಲೋಪ ಉಂಟಾಗಿರುತ್ತದೋ ಆ ಹಂತದಿಂದ ವಿಚಾರಣೆಯನ್ನು ಮುಂದುವರೆಸುವಂತೆ, ಮತ್ತು ಆರು ತಿಂಗಳೊಳಗಾಗಿ ವಿಚಾರಣೆಯನ್ನು ಮುಗಿಸುವಂತೆ ನಿರ್ದೇಶಿಸಿರುತ್ತದೆ, ಆದುದರಿಂದ, ಈ ಬಗ್ಗೆ ವಿವರವಾಗಿ ಪರಿಶೀಲಿಸಲಾಗಿದ್ದು ನ್ಯಾಯ ಮಂಡಳಿಯ ಆದೇಶದನ್ವಯ ಈ ಪ್ರಕರಣದಲ್ಲಿ ಯಾವ ಹಂತದಲ್ಲಿ ಲೋಪ ಉಂಟಾಗಿರುತ್ತದೋ ಆ ಹಂತದಿಂದ ನಿಯಮಗಳ ಸ್ಪಷ್ಟ ಪಾಲನೆ ಮಾಡಿ ವಿಚಾರಣೆ ನಡೆಸಲು ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 109 ವಿಸೇಬಿ 96, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ತಿಳಿಸಲಾದ ಅಂಶಗಳನ್ವಯ, ಶ್ರೀ ರವಿ ಆನಂದರಾವ್ ಮತ್ತು ಶ್ರೀ ಚಂದ್ರಶೇಖರಸ್ವಾಮಿ ಹಿಂದಿನ ಕಿರಿಯ ಇಂಜಿನಿಯರ್‌ಗಳು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಾರ್ಯಾಲಯ, ಚಿಂಚೋಳಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹೊರಡಿಸಲಾದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ದಿನಾಂಕ: 6.3.2003ರ ಆದೇಶವನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ರದ್ದುಪಡಿಸಿರುವ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಯಾವ ಹಂತದಲ್ಲಿ ಲೋಪ ಉಂಟಾಗಿದೆಯೋ ಆ ಹಂತದಿಂದ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ ಸ್ಪಷ್ಟ ಪಾಲನೆಯಿಂದ ಇಲಾಖಾ ವಿಚಾರಣೆಯನ್ನು ಮುಂದುವರೆಸುವಂತೆ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ರವರನ್ನು (ವಿಚಾರಣಾಧಿಕಾರಿ) ಹಾಗೂ ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾಪಂಚಾಯತ್, ಗುಲ್ಬರ್ಗಾ (ಮಂಡನಾಧಿಕಾರಿ) ಇವರಿಗೆ ಆದೇಶಿಸಲಾಗಿದೆ.

ವಿಚಾರಣೆ ಕಾಲದಲ್ಲಿ ವಿಚಾರಣಾಧಿಕಾರಿಯವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಎತ್ತಿರುವ ದೋಷಗಳು ಮರುಕಳಿಸದಂತೆ ನಿಗಾವಹಿಸಿ, ನಿಗದಿತ ಕಾಲಮಿತಿಯಲ್ಲಿ ವಿಚಾರಣೆಯನ್ನು ಮುಕ್ತಾಯಗೊಳಿಸಿ, ವಿಚಾರಣಾ ವರದಿ ಮತ್ತು ಅದರ ಅಭಿಲೇಖನಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುವಂತೆ ಸೂಚಿಸಿದೆ.

ಈ ಪ್ರಕರಣದಲ್ಲಿ, ಸರ್ಕಾರವು ಶಿಸ್ತು ಪ್ರಾಧಿಕಾರವಾಗಿದ್ದು ಆರೋಪಿತರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಗಳ ನಿಯಮ-8 ರಲ್ಲಿನ ಯಾವುದಾದರೂ ಒಂದು ಅಥವಾ ಹೆಚ್ಚಿನ ದಂಡನೆ ವಿಧಿಸಲು ಸಕ್ಷಮವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಷಣ್ಮುಖ**

ಪಿ.ಆರ್. 1461

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ENERGY SECRETARIAT

**Sub :** Enhancement of the allotted capacity 21 M.W. to 24.75 M.W to M/s Pioneer Genco Limited.

**Read :**
1. Government Order No. DE 38 NCE 2002 dated: 13.6.2002
2. Government Order No. DE 38 NCE 2002 dated: 7.12.2002
3. Letter No. K.R.E.D./06-Pioneer/2003/1765 dated: 13.11.2003 from the Managing Director, Karnataka Renewable Energy Development, Limited, Bangalore.

**Preamble:**

In the Government Order No. DE 38 NCE 2002 dated: 13.06.2002 read at (1) above M/s. Pioneer Genco Limited, Hydrabad has been alloted 2 M.W capacity Mini Hydel Power Project across Cauvery river, 2 K.M. down stream of Shivanasamudram Village, Malavalli Taluk, Manday District.

2. In the Government Order No. DE 38 NCE 2002 dated: 7.12.2002 read at (2) above, the capacity has been enhanced from 2. M.W. to 21. M. W to the said company.

3. Now the Managing Director, Karnataka Renewable Energy Development, Limited, Bangalore in his letter dated: 13.11.2003 read at (3) above has recommended for further enhancement of the capacity from 21 M.W to 24. 75 M. W to the said company for the reasons stated therein.

1. The proposal has been examined, hence the following order;

**Government Order No. DE 277 NCE 2003, Bangalore, Dated: 15th November 2003**

5. In the circumstances explained in the preamble, the Government are pleased to enhance the capacity from 21 M. W to 24.75 M. W to M/s Pioneer Genco Limited, Hydrabad Project across cauvery river, 2 K. M. down stream of Shivanasamudram Village, Malavalli Taluk, Manday District.

6. The other terms and conditions laid down in the Government Order No. DE 38 NCE 2002 dated: 13.06.2002 Ipsofacto applicable.

By Order and in the name of the Governor of Karnataka,

**K. L. JAYARAM**

PR-1462

Under Secretary to Government,

Energy Department.

## ಇಂಧನ ಸಚಿವಾಲಯ

**ವಿಷಯ :** ಮೆಸರ್ಸ್ ಪೀನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 06/ದೇವರಬೆಟ್ಟ/2003/1712. ದಿನಾಂಕ: 3.11.2003.

2. ದಿನಾಂಕ: 5.11.2003ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಪಿನೇಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್, ಈ ಕಂಪೆನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ದೇವರಬೆಟ್ಟ ಹೊಳೆಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 267 ಎನ್‌ಸಿಇ 2003, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಪಿನೇಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್, ಈ ಕಂಪೆನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ದೇವರಬೆಟ್ಟ ಹೊಳೆಗೆ ಅಡ್ಡಲಾಗಿ 2 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ಲ್ಯಾಂಜಿಟ್ಯೂಡ್ 75-39'-11" ಪೂರ್ವ ಮತ್ತು ಲ್ಯಾಟಿಟ್ಯೂಡ್ 12-54'-30" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   (ಆ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.) ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝುರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2,3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1463

**ವಿಷಯ :** ಮೆಸರ್ಸ್ ಆಕಾಶ ಗಂಗಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 2 ಮೆಗಾವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/ 06/ಚಪ್ಪರಹಳ್ಳಿ/2003/1711. ದಿನಾಂಕ: 3.11.2003.

2. ದಿನಾಂಕ: 5.11.2003ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಆಕಾಶ ಗಂಗಾ ಎನರ್ಜಿ ಪ್ರೈವೇಟ್ ಲಿಮಿಟೆಡ್, ಈ ಕಂಪೆನಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಹೊಳೆಗಂಡಿ ಗ್ರಾಮದ ಚಪ್ಪರ ಹೊಳೆಗೆ ಅಡ್ಡಲಾಗಿ 2 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 268 ಎನ್‌ಸಿಇ 2003, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಆಕಾಶ ಗಂಗಾ ಎನರ್ಜಿ ಪ್ರೈವೇಟ್ ಲಿಮಿಟೆಡ್, ಈ ಕಂಪೆನಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಹೊಳೆಗಂಡಿ ಗ್ರಾಮದ ಚಪ್ಪರ ಹೊಳೆಗೆ ಅಡ್ಡಲಾಗಿ 2 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ವಯರ್-1 ಲ್ಯಾಂಜಿಟ್ಯೂಡ್ 75-33'-6" ಪೂರ್ವ ಮತ್ತು ಲ್ಯಾಟಿಟ್ಯೂಡ್ 12-59'-32" ಉತ್ತರ ವಯರ್-2 ಲ್ಯಾಂಜಿಟ್ಯೂಡ್ 75-32'-37" ಪೂರ್ವ ಮತ್ತು ಲ್ಯಾಟಿಟ್ಯೂಡ್ 12-59'-41" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   (ಆ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಅರಣ್ಯ/ ಪರಿಸರ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. Minimum flow of the water to be maintained ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2,3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಲ್. ಜಯರಾಂ**

ಪಿ.ಆರ್. 1464 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಸಂಡೂರ್ ಪವರ್ ಕಂಪನಿ ಲಿಮಿಟೆಡ್‌ನ ವರಾಹಿ ಟೇಲ್‌ರೇಸ್ ಕಿರು ಜಲ ವಿದ್ಯುತ್ ಯೋಜನೆ ವಿಸ್ತರಣೆ ಬಗ್ಗೆ - ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 164 ಪಿಪಿಸಿ 94 (3), ದಿನಾಂಕ: 6-9-1994.

2. ಸರ್ಕಾರಿ ಆದೇಶ ಸಂಖ್ಯೆ: ಇಂಇ 238 ಎನ್‌ಸಿ ಇ 2001, ದಿನಾಂಕ: 10-12-2001.

3. ಮೆಸರ್ಸ್ ಸಂಡೂರು ಪವರ್ ಕಂಪನಿ ಲಿಮಿಟೆಡ್‌ನ ಕಂಪನಿಯ ಪತ್ರ ಸಂಖ್ಯೆ: SPCL/ ED/ ED/ 337, ದಿನಾಂಕ: 19-9-2003.

4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಎ1 ವಿಇ1/ ಯು, 3&4, ದಿನಾಂಕ: 20-11-2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಸಂಡೂರು ಮ್ಯಾಂಗನೀಸ್ ಅಂಡ್ ಐರನ್ ಓರ್ಸ್ ಲಿಮಿಟೆಡ್ ಕಂಪನಿಗೆ 15 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಟೇಲ್‌ರೇಸ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಹಂಚಿಕೆ ಆಗಿರುವ 15 ಮೆಗಾ ವ್ಯಾಟ್ ಸಾಮರ್ಥ್ಯವನ್ನು 22.5 ಮೆಗಾ ವ್ಯಾಟ್‌ಗೆ ಮೇಲೆ (2)ರ ಆದೇಶದಲ್ಲಿ ಹೆಚ್ಚಿಸಲಾಗಿದೆ.

3. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮೆಸರ್ಸ್ ಸಂಡೂರು ಪವರ್ ಕಂಪನಿ ಲಿಮಿಟೆಡ್‌ನ ಕಾರ್ಯಕಾರಿ ನಿರ್ದೇಶಕರು, ಸದರಿ ಯೋಜನೆಯಲ್ಲಿ 7.5 ಮೆಗಾ ವ್ಯಾಟ್‌ನ 2 ಹೆಚ್ಚಿನ ಘಟಕಗಳನ್ನು ಅನುಷ್ಠಾನ ಮಾಡಲು ಅನುಮತಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಕೆಲವು ಷರತ್ತುಗಳನ್ನು ವಿಧಿಸಿ, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ.

5. ಆದ್ದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 250 ಎನ್‌ಸಿಇ 2003, ಬೆಂಗಳೂರು, ದಿನಾಂಕ: 15ನೇ ನವೆಂಬರ್, 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ, ಸರ್ಕಾರವು ಮೆಸರ್ಸ್ ಸಂಡೂರು ಪವರ್ ಕಂಪನಿ ಲಿಮಿಟೆಡ್‌ಗೆ 22.5 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಟೇಲ್‌ರೇಸ್ ಕಿರು ಜಲ ವಿದ್ಯುತ್ ಯೋಜನೆಗೆ 7.5 ಮೆಗಾ ವ್ಯಾಟ್‌ಗಳ ಎರಡು ಹೆಚ್ಚುವರಿ ಘಟಕಗಳನ್ನು ಅನುಷ್ಠಾನ ಮಾಡಲು ಈ ಕೆಳಗಿನ ನಿಬಂಧನೆಗಳೊಂದಿಗೆ ಅನುಮತಿ ನೀಡಲಾಗಿದೆ.

ಅ. ಯೋಜಿತ ಹೆಚ್ಚುವರಿ ಘಟ್ಟಗಳ ಅನುಷ್ಠಾನದಿಂದ, ವರಾಹಿ ಭೂಗರ್ಭ ವಿದ್ಯುದಾಗಾರದ ಕಾರ್ಯನಿರ್ವಹಣೆಗೆ ಯಾವುದೇ ಅಡ್ಡಿಯಾಗಬಾರದು.

ಆ. ವರಾಹಿ ಭೂಗರ್ಭ ವಿದ್ಯುದಾಗಾರದ ಟೈಲ್ ವಾಟರ್ ಲೆವಲ್ 86.00 ಮೀ.ರನ್ನು ಮೀರದಂತೆ ನಿಯಂತ್ರಿಸುವುದು.

ಇ. ಮೆಸರ್ಸ್ ಸಂಡೂರ್ ಪವರ್ ಕಂಪನಿ ಲಿಮಿಟೆಡ್‌ನವರು ತಮ್ಮ ಪ್ರಸ್ತಾಪಿತ ವಿದ್ಯುದಾಗಾರವನ್ನು ವರಾಹಿ ಭೂಗರ್ಭ ವಿದ್ಯುದಾಗಾರದ ವಿದ್ಯುತ್ ಉತ್ಪಾದನೆಗೆ ತಕ್ಕಂತೆ ನಿಯಂತ್ರಿಸುವುದು.

ಮೇಲೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರ ಷರತ್ತುಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1465

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ರಾಜ್ಯದ ಮಾಜಿ ಭೂ ಮಾಲೀಕರಿಗೆ 2003-04ನೇ ಸಾಲಿಗೆ ಭೂ ಪರಿಹಾರ ನೀಡಲು ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿ, ಕೊಪ್ಪಳ ಅವರ ಪತ್ರ ಸಂಖ್ಯೆ: 38:02-03, ದಿನಾಂಕ: 11-11-2002.

2. ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಅವರ ಪತ್ರ ಸಂಖ್ಯೆ: 19:03-04, ದಿನಾಂಕ: 23-6-2003.

3. ಜಿಲ್ಲಾಧಿಕಾರಿ, ಬಿಜಾಪುರ ಅವರ ಪತ್ರ ಸಂಖ್ಯೆ: 7: 02-03, ದಿನಾಂಕ: 25-4-2002.

4. ಜಿಲ್ಲಾಧಿಕಾರಿ, ಮೈಸೂರು ಅವರ ಪತ್ರ ಸಂಖ್ಯೆ: 6-02-03, ದಿನಾಂಕ: 13-6-2003.

5. ಜಿಲ್ಲಾಧಿಕಾರಿ, ಕೋಲಾರ ಅವರ ಪತ್ರ ಸಂಖ್ಯೆ: 131: 00-01, ದಿನಾಂಕ: 24-2-2003.

6. ವಿಭಾಗಾಧಿಕಾರಿ, ಬೆಂಗಳೂರು ವಿಭಾಗ ಅವರ ಪತ್ರ ಸಂಖ್ಯೆ: 50: 00-02, ದಿನಾಂಕ: 15-11-2002.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿ, ಕೊಪ್ಪಳ ಅವರು ಮಾಜಿ ಭೂ ಮಾಲೀಕರಿಗೆ ಭೂ ಪರಿಹಾರ ನೀಡುವ ಸಲುವಾಗಿ ರೂ. 20,00,000-00 ಕ್ಕೆ, ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳು ರೂ. 44,00,000-00ಕ್ಕೆ ಬಿಜಾಪುರ ಜಿಲ್ಲಾಧಿಕಾರಿಗಳು 5,00,000-00ಕ್ಕೆ ಮೈಸೂರು ಜಿಲ್ಲಾಧಿಕಾರಿಗಳು ರೂ. 23,588-00ಕ್ಕೆ, ಕೋಲಾರ ಜಿಲ್ಲಾಧಿಕಾರಿಗಳು, 4,50,000-00ಕ್ಕೆ ಮತ್ತು ಬೆಂಗಳೂರು ವಿಭಾಗಾಧಿಕಾರಿಗಳು ರೂ. 1,75,000-00ಕ್ಕೆ ಬೇಡಿಕೆ ಸಲ್ಲಿಸಿದ್ದು ಅದನ್ನು ಪರಿಶೀಲಿಸಿದ ಸರ್ಕಾರವು ಅನುದಾನವನ್ನು ಬಿಡುಗಡೆ ಮಾಡಬೇಕಾದ ಅವಶ್ಯಕತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಆದೇಶ ಸಂಖ್ಯೆ: ಆರ್‌ಡಿ 43 ಎಲ್‌ಆರ್‌ಎ 2001, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2003**

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಅಡಿಯಲ್ಲಿ ಭೂಮಿಯನ್ನು ಕಳೆದುಕೊಂಡ ಮಾಜಿ ಭೂ ಮಾಲೀಕರಿಗೆ ಪರಿಹಾರವನ್ನು ಪಾವತಿಸಲು 2003-2004ನೇ ಸಾಲಿಗೆ ಲೆಕ್ಕ ಶೀರ್ಷಿಕೆ "4515-00-103-1-01-100"ರ ಅಡಿಯಲ್ಲಿ ನಗದು ಮೂಲಕ ಪರಿಹಾರ ಪಾವತಿಸಲು ಅನುವಾಗುವಂತೆ ಈ ಕೆಳಕಂಡ ಜಿಲ್ಲೆಗಳಿಗೆ ಅನುದಾನ ಬಿಡುಗಡೆ ಮಾಡಿ ಆದೇಶ ಹೊರಡಿಸಿದೆ.

| | | |
|---|---|---|
| 1) | ಕೊಪ್ಪಳ ಜಿಲ್ಲೆಗೆ | ರೂ. 4,00,000-00 |
| 2) | ದಕ್ಷಿಣ ಕನ್ನಡ ಜಿಲ್ಲೆಗೆ | ರೂ. 4,01,412-00 |
| 3) | ಬಿಜಾಪುರ ಜಿಲ್ಲೆಗೆ | ರೂ. 2,00,000-00 |
| 4) | ಮೈಸೂರು ಜಿಲ್ಲೆಗೆ | ರೂ. 23,588-00 |
| 5) | ಕೋಲಾರ ಜಿಲ್ಲೆಗೆ | ರೂ. 2,00,000-00 |
| 6) | ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ | ರೂ. 50,000-00 |
| 7) | ಬೆಂಗಳೂರು ನಗರ ಜಿಲ್ಲೆಗೆ | ರೂ. 30,000-00 |
| 8) | ಶಿವಮೊಗ್ಗ ಜಿಲ್ಲೆಗೆ | ರೂ. 20,000-00 |
| 9) | ಚಿತ್ರದುರ್ಗ ಜಿಲ್ಲೆಗೆ | ರೂ. 10,000-00 |
| 10) | ದಾವಣಗೆರೆ ಜಿಲ್ಲೆಗೆ | ರೂ. 5,000-00 |
| 11) | ಮಂಡ್ಯ ಜಿಲ್ಲೆಗೆ | ರೂ. 10,709-00 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1093 ವೆಚ್ಚ -7: 2003, ದಿನಾಂಕ: 21-10-2003ರಲ್ಲಿ ನೀಡಿದ ಸಹಮತಿ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1466 **ವಿ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ).

## ಕಾರ್ಮಿಕ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕಾಇ 104 ಇಟಿಎಕ್ಸ್ 96, ಬೆಂಗಳೂರು, ದಿನಾಂಕ: 4ನೇ ನವೆಂಬರ್, 2003**

ಸರ್ಕಾರಿ ಆದೇಶ ಸಂಖ್ಯೆ: ಕಾಇ 104 ಇಟಿಎಕ್ಸ್ 96, ದಿನಾಂಕ: 31-10-2003ರಲ್ಲಿ "ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1977" ಎಂಬುದರ ಬದಲಾಗಿ "ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1467 **ಎನ್. ಸುಬ್ರಮಣ್ಯರಾವ್**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## ಕಂದಾಯ ಸಚಿವಾಲಯ

**ವಿಷಯ:** ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ ಈ ಸಂಸ್ಥೆಯ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 77 ಮುನೊಸೊ 99, ದಿನಾಂಕ: 10-4-2000.

**ಪ್ರಸ್ತಾವನೆ:**

ಓದಲಾದ (1)ರ ಸರ್ಕಾರಿ ಆದೇಶದಲ್ಲಿ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿದೆ. ಹಾಗೂ ಆಡಳಿತಾಧಿಕಾರಿ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲಾಗಿದ್ದು, ಆಡಳಿತಾಧಿಕಾರಿಯವರ ಅವಧಿ ದಿನಾಂಕ: 9-10-2003ಕ್ಕೆ ಕೊನೆಗೊಳ್ಳಲಿರುವುದರಿಂದ ಆಡಳಿತಾಧಿಕಾರಿ ಅವಧಿ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 77 ಮುನೋಸೊ 99, ಬೆಂಗಳೂರು, ದಿನಾಂಕ: 12ನೇ ನವೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಶ್ರೀ ವಿದ್ಯಾ ಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ ಇದಕ್ಕೆ ನೇಮಕವಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 10-10-2003ರಿಂದ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲಾಗಿದೆ. ವಿಸ್ತರಿಸಿದ ಅವಧಿಯೊಳಗೆ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಆಡಳಿತ ಹಸ್ತಾಂತರಿಸಲು ಸೂಕ್ತ ಕ್ರಮ ತೆಗೆದುಕೊಳ್ಳಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1468 **ಎಸ್. ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀಗಂಧದ ಕಾವಲು ವಸತಿ ರಹಿತರ ಸಂಘ, ಸುಂಕದ ಕಟ್ಟೆ, ವಿಶ್ವನೀಡಂ ಅಂಚೆ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** 1. ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಅವರ ವರದಿ ಸಂಖ್ಯೆ: 48-72-73, ದಿನಾಂಕ: 8-4-2003.

2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 10 ಮುನೊಸೊ 03, ದಿನಾಂಕ: 28-5-2003.

3. ಅಧ್ಯಕ್ಷರು, ಶ್ರೀಗಂಧದ ಕಾವಲು ವಸತಿ ರಹಿತರ ಸಂಘ, ಸುಂಕದಕಟ್ಟೆ, ಅವರ ಲಿಖಿತ ಹೇಳಿಕೆ ಸಂಖ್ಯೆ: ಶ್ರೀ ಗ.ವ.ರ.ಸಂ. 12: 2003, ದಿನಾಂಕ: 3-10-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ವರದಿಯಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಅವರು ಶ್ರೀಗಂಧದ ಕಾವಲು ವಸತಿ ರಹಿತರ ಸಂಘ, ಸುಂಕದ ಕಟ್ಟೆ, ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ಪ್ರಕಾರ ನೋಂದಾಯಿಸಿದ್ದು, ಸಂಸ್ಥೆಯು 1993 ನೇ ಸಾಲಿನವರೆಗೆ ಲೆಕ್ಕಪತ್ರ ದಾಖಲಿಸಿದೆ. ಈ ಕುರಿತು ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರ ಪ್ರಕಾರ ತನಿಖೆ ನಡೆಸಲಾಗಿ ಸಂಸ್ಥೆಯಲ್ಲಿ ಗುಂಪುಗಾರಿಕೆ ಇದೆ. 1993ರಿಂದ ಸಂಘದ ಲೆಕ್ಕಪತ್ರ ಒಪ್ಪಿಸಿಲ್ಲ. ಸಂಸ್ಥೆಯು ನಿವೇಶನಗಳನ್ನು ರಚಿಸಿ ನಕಲಿ ಸದಸ್ಯರಿಗೆ ನಿವೇಶನ ಹಂಚಿದೆ. ಅಲ್ಲದೇ ಸಂಘದ ಕಾರ್ಯದರ್ಶಿ ವಿರುದ್ಧ ಸಿ.ಸಿ.ಬಿ. ಪೊಲೀಸರಿಂದ ವಿಚಾರಣೆ ನಡೆಯುತ್ತಿದ್ದು, ಸಂಸ್ಥೆಯು ಸಂಘಗಳ ನೋಂದಣಿ ಕಾಯ್ದೆ ಕಲಂಗಳ ಉಲ್ಲಂಘನೆ ಮಾಡಿದೆ. ಆದ್ದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ, ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಜಿಲ್ಲಾ ನೊಂದಣಾಧಿಕಾರಿಗಳ ವರದಿಯ ಮೇಲೆ ಓದಲಾದ (2)ರ ಪ್ರಕಾರ ಸಂಸ್ಥೆಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ, ಓದಲಾದ (3)ರ ಪ್ರಕಾರ ಸಂಘದಿಂದ ಲಿಖಿತ ಹೇಳಿಕೆ ಪಡೆದು ಪರಿಶೀಲಿಸಲಾಗಿ ಸಂಸ್ಥೆಯ ಹೇಳಿಕೆಯು ನಂಬಲರ್ಹವಾಗಿಲ್ಲವೆಂದು ಕಂಡುಬಂದಿದ್ದರಿಂದ, ಸದರಿ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2003, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಗಂಧದ ಕಾವಲು ವಸತಿ ರಹಿತರ ಸಂಘ, ಸುಂಕದಕಟ್ಟೆ, ವಿಶ್ವನೀಡಂ, ಬೆಂಗಳೂರು ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಉತ್ತರ ತಾಲ್ಲೂಕು ತಹಶೀಲ್ದಾರರನ್ನು 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದಲ್ಲಿಯ ಲೋಪದೋಷಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1469

**ಎಸ್. ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಜನರಲ್ ಎಜುಕೇಷನ್ ಸೆಂಟರ್ ಈ ಸಂಸ್ಥೆಗೆ ನೇಮಕವಾದ ಆಡಳಿತಾಧಿಕಾರಿ ಬದಲಾವಣೆ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 49 ಮುನೋಸೊ 99, ದಿನಾಂಕ: 12.1.2001.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 12-1-2001ರಂದು ಜನರಲ್ ಎಜ್ಯುಕೇಷನ್ ಸೆಂಟರ್, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿದೆ. ಹಾಗೂ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿ ವಿಸ್ತರಿಸಿಕೊಂಡು ಬರಲಾಗಿದೆ. ದಿನಾಂಕ: 21-4-2003ರ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 11-7-2003 ರವರೆಗೆ ವಿಸ್ತರಿಸಲಾಗಿತ್ತು. ಸಂಘಕ್ಕೆ ಚುನಾವಣೆಗಳು ನಡೆಯದೇ ಇದ್ದುದರಿಂದ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 49 ಮುನೋಸೊ 99, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಜನರಲ್ ಎಜುಕೇಷನ್ ಸೆಂಟರ್, ಕಾಟನ್ ಪೇಟೆ ಮುಖ್ಯರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯಾಗಿ ನೇಮಕವಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 12-7-2003ರಿಂದ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯಲ್ಲಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1470

**ಎಸ್. ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ-ಆಲೂರು, ಈ ಸಂಘಕ್ಕೆ ನೇಮಕ ಮಾಡಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 54: ಮುನೊಸೊ 99, ದಿನಾಂಕ: 11-10-2001.

2. ಉಪ ವಿಭಾಗಾಧಿಕಾರಿ: ಆಡಳಿತಾಧಿಕಾರಿ ಇವರ ಪತ್ರ ಸಂಖ್ಯೆ: ಕೆವಿಪಿಎಸ್ : ವಹಿ 1: 03-04, ದಿನಾಂಕ: 15-10-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ದಿನಾಂಕ: 11-10-2001ರಂದು ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ-ಆಲೂರ ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿ, ಉಪವಿಭಾಗಾಧಿಕಾರಿಗಳು ಗದಗ್‌ರವರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ಓದಲಾದ (2)ರಲ್ಲಿ ಆಡಳಿತಾಧಿಕಾರಿಗಳು ದಿನಾಂಕ: 15-10-2003ರಂದು ವರದಿ ನೀಡಿ ಸಂಸ್ಥೆಯ ನ್ಯಾಯಾಲಯದ ಪ್ರಕರಣ ಹಾಗೂ ಇತರ ವ್ಯವಹಾರಗಳನ್ನು ಸರಿಪಡಿಸಲು ಹೆಚ್ಚಿನ ಸಮಯಾವಕಾಶ ನೀಡಬೇಕೆಂದು ಕೋರಿರುತ್ತಾರೆ. ಆಡಳಿತಾಧಿಕಾರಿಗಳ ವರದಿಯನ್ನು ಪರಿಶೀಲಿಸಿ, ಸರ್ಕಾರವು ಆಡಳಿತಾಧಿಕಾರಿಯವರ ಅವಧಿಯನ್ನು ಇನ್ನೂ 6 ತಿಂಗಳ ಅವಧಿಗೆ ವಿಸ್ತರಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 54 ಮುನೊಸೋ 99, ಬೆಂಗಳೂರು, ದಿನಾಂಕ: 15ನೇ ನವೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ, ಕಾಯ್ದೆ, 1960ರ ಕಲಂ 27-ಎ ಪ್ರಕಾರ ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ-ಆಲೂರ ಈ ಸಂಘಕ್ಕೆ ನೇಮಕ ಮಾಡಿದ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ: 11-10-2003 ರಿಂದ 6 ತಿಂಗಳ ಅವಧಿಗೆ ಅಥವಾ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1471

**ಎಸ್. ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಹೊಯ್ಸಳ ಸಂಘ, ಮೈಸೂರು ಈ ಸಂಸ್ಥೆಗೆ ನೇಮಕವಾದ ಆಡಳಿತಾಧಿಕಾರಿಯ ಅವಧಿಯ ವಿಸ್ತರಣೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 68 ಮುನೊಸೊ 99, ದಿನಾಂಕ: 2-2-2001.

2. ಆಡಳಿತಾಧಿಕಾರಿಯವರ ವರದಿ ಸಂಖ್ಯೆ: ಚುನಾವಣೆ -ಪಿಆರ್-4-03-04, ದಿನಾಂಕ: 14-10-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಹೊಯ್ಸಳ ಕರ್ನಾಟಕ ಸಂಘ, ಮೈಸೂರು ನಾರಾಯಣ ಶಾಸ್ತ್ರಿ ರಸ್ತೆ, ಮೈಸೂರು ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಸಂಸ್ಥೆಗೆ ಚುನಾವಣೆ ನಡೆಸಲು ದಿನಾಂಕ: 2-2-2001ರಂದು ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಓದಲಾದ (2)ರಲ್ಲಿ ಆಡಳಿತಾಧಿಕಾರಿಗಳು ವರದಿ ಸಲ್ಲಿಸಿ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ನೇಮಕಕ್ಕೆ ನ್ಯಾಯಾಲಯದ ತಾತ್ಕಾಲಿಕ ತಡೆಯಾಜ್ಞೆ ಇದ್ದಿತು. ಈಗ ನ್ಯಾಯಾಲಯವು ಮೇಲ್ಮನವಿ ವಜಾ ಮಾಡಿದೆ. ಈ ಹಿನ್ನೆಲೆಯಲ್ಲಿ ಅವಧಿಯನ್ನು ವಿಸ್ತರಿಸಲು ಕೋರಿದ್ದಾರೆ. ಆಡಳಿತಾಧಿಕಾರಿ ವರದಿಯನ್ನು ಪರಿಶೀಲಿಸಿದ ಸರ್ಕಾರವು ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 68 ಮುನೊಸೊ 99, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಹೊಯ್ಸಳ ಕರ್ನಾಟಕ ಸಂಘ ಮೈಸೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ, ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 2-8-2001ರಿಂದ 1-2-2002, 2-2-2002ರಿಂದ 1-8-2003 ಹಾಗೂ 2-8-2002 ರಿಂದ 1-2-2004ರವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1472

**ಎಸ್. ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀ ಎಂ. ಎಲ್. ತ್ರಿವಿಕ್ರಮರಾವ್, ತಹಶೀಲ್ದಾರ್, ಸಿದ್ದಾಪುರ ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯ ಪ್ರತಿಕೂಲ ಷರಾದ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 5-2-2003ರ ಬೆಳಗಾವಿ ವಿಭಾಗಾಧಿಕಾರಿಯವರ ಪತ್ರದ ಸಂ: ಕಂಶಾ: ಡಿವಿಸಿ: ಅಸ: 97: 02-03.

2. ಶ್ರೀ ಎಂ. ಎಲ್ ತ್ರಿವಿಕ್ರಮರಾವ್, ತಹಶೀಲ್ದಾರ್ ಇವರ ದಿನಾಂಕ: 4-2-2003ರ ಮನವಿ.

3. ಗದಗ್ ಜಿಲ್ಲಾಧಿಕಾರಿಯವರ ಪತ್ರದ ಸಂ: ಸಿಬ್ಬಂದಿ-1: ವಹಿ-28: 2003-04, ದಿನಾಂಕ: 21-6-2003.

4. ಉತ್ತರ ಕನ್ನಡ ಜಿಲ್ಲಾಧಿಕಾರಿಯವರ ಪತ್ರದ ಸಂ: ಜಿಅ : ಆಶಾ: ವಿವ 66 : 2003-04, ದಿನಾಂಕ: 20-8-2003.

**ಪ್ರಸ್ತಾವನೆ:**

ಈ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ವಿಭಾಗಾಧಿಕಾರಿಗಳು, ಬೆಳಗಾಂ ವಿಭಾಗ, ಬೆಳಗಾಂ ಇವರು ಶ್ರೀ ಎಂ.ಎಲ್. ತ್ರಿವಿಕ್ರಮರಾವ್, ತಹಶೀಲ್ದಾರ್, ಸಿದ್ದಾಪುರ, ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಪುನರ್ ಅವಲೋಕನ ಮಾಡುವ ಪ್ರಾಧಿಕಾರಿಯು ಮಾಡಿರುವ ಪ್ರತಿಕೂಲ ಷರಾಗಳನ್ನು ಸದರಿ ತಹಶೀಲ್ದಾರ್‌ರಿಗೆ ಜಾರಿ ಮಾಡಿರುವ ಬಗ್ಗೆ ತಿಳಿಸಿರುತ್ತಾರೆ.

ಶ್ರೀ ಎಂ. ಎಲ್. ತ್ರಿವಿಕ್ರಮರಾವ್, ತಹಶೀಲ್ದಾರ್, ಸಿದ್ದಾಪುರ, ಇವರು ಕ್ರಮ ಸಂಖ್ಯೆ (2)ರಲ್ಲಿ ಸರ್ಕಾರಕ್ಕೆ ಒಂದು ವರದಿಯನ್ನು ಸಲ್ಲಿಸಿ, 2001-02 ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ತಿಳಿಸಿರುವ ಸೂಚನೆಗಳನ್ನು ಪಾಲಿಸಿ ನಡೆದುಕೊಳ್ಳಲಾಗುತ್ತಿದೆ. ಆದ್ದರಿಂದ ಈ ಸಲಹಾತ್ಮಕ ಷರಾಗಳನ್ನು ಪ್ರತಿಕೂಲ ಷರಾ ಎಂದು ಪರಿಗಣಿಸಬಾರದೆಂದು ಕೋರಿದ್ದಾರೆ.

ಶ್ರೀ ಎಂ. ಎಲ್. ತ್ರಿವಿಕ್ರಮರಾವ್, ತಹಶೀಲ್ದಾರ್, ಇವರ ಮನವಿಯನ್ನು ಪುನರ್ ಅವಲೋಕನ ಮಾಡುವ ಪ್ರಾಧಿಕಾರಿಯಾದ ಗದಗ ಜಿಲ್ಲಾಧಿಕಾರಿಯವರಿಗೆ ಕಳುಹಿಸಿ, ಈ ಬಗ್ಗೆ ಅವರ ನಿಲುವು : ಅಭಿಪ್ರಾಯ ನೀಡುವಂತೆ ಕೋರಲಾಗಿತ್ತು. ಈ ಮೇರೆಗೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 21-6-03ರ ಪತ್ರದಲ್ಲಿ ಗದಗ್ ಜಿಲ್ಲಾಧಿಕಾರಿಯವರು ಸದರಿ ತಹಶೀಲ್ದಾರ್‌ರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಸಲಹಾತ್ಮಕ ಷರಾ ನಮೂದಿಸಿ, 2002-03ರ ಅವಧಿಯಲ್ಲಿ ಕಾರ್ಯಕ್ಷಮತೆಯಲ್ಲಿ ಹೆಚ್ಚಿನ ಸುಧಾರಣೆಯಾಗದಿದ್ದರೆ ಸಲಹಾತ್ಮಕ ಷರಾವು ಪ್ರತಿಕೂಲ ಷರಾ ಆಗಿ ಪರಿಣಮಿಸಬಹುದೆಂದು ನಮೂದಿಸಿರುವುದರಿಂದ 2002-03ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿನ ಕಾರ್ಯಕ್ಷಮತೆಯ ಬಗ್ಗೆ ಸರ್ಕಾರಕ್ಕೆ ತಿಳಿಸುವಂತೆ ಉತ್ತರ ಕನ್ನಡ ಜಿಲ್ಲಾಧಿಕಾರಿಯವರಿಗೆ ಬರೆದಿರುವ ಪತ್ರದ ಪ್ರತಿಯನ್ನು ಸರ್ಕಾರಕ್ಕೆ ಮಾಹಿತಿಗಾಗಿ ಕಳುಹಿಸಿದ್ದಾರೆ.

ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲಾಧಿಕಾರಿಯವರು, ಶ್ರೀ ಎಂ. ಎಲ್. ತ್ರಿವಿಕ್ರಮರಾವ್, ತಹಶೀಲ್ದಾರ್, ಇವರು ಸಿದ್ದಾಪುರದಲ್ಲಿ ವರದಿ ಮಾಡಿಕೊಂಡ ನಂತರ ಅವರ ಕಾರ್ಯಕ್ಷಮತೆಯಲ್ಲಿ ಸುಧಾರಣೆ ಕಂಡುಬಂದಿದೆ ಹಾಗೂ 2002-03ನೇ ಸಾಲಿನ ಅವರ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಯಾವುದೇ ಪ್ರತಿಕೂಲ ಷರಾ ನಮೂದಿಸಿರುವುದಿಲ್ಲ ಮತ್ತು ಅವರ ಕಾರ್ಯ ನಿರ್ವಹಣೆ ಸಮಾಧಾನಕರವಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪುನರ್ ಅವಲೋಕನ ಮಾಡುವ ಪ್ರಾಧಿಕಾರಿಯ ಅಭಿಪ್ರಾಯವನ್ನು ಪರಿಗಣಿಸಿ, ಶ್ರೀ ಎಂ. ಎಲ್. ತ್ರಿವಿಕ್ರಮರಾವ್, ತಹಶೀಲ್ದಾರ್, ಸಿದ್ದಾಪುರ, ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾಗಳನ್ನು "ಸಲಹಾತ್ಮಕ ಷರಾ" ಎಂದು ಪರಿಗಣಿಸಲು ತೀರ್ಮಾನಿಸಿರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 89 ಎಎಸ್‌ಡಿ 03, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2003**

2000ದ ಕರ್ನಾಟಕ ಸೇವಾ (ಕಾರ್ಯನಿರ್ವಹಣಾ ವರದಿ) ನಿಯಮಾವಳಿಯ 10 (2)ನೇ ನಿಯಮದಲ್ಲಿ ವಿಹಿತವಾದ ಅಧಿಕಾರವನ್ನು ಚಲಾಯಿಸಿ, ಸರಕಾರವು ಶ್ರೀ ಎಂ. ಎಲ್. ತ್ರಿವಿಕ್ರಮರಾವ್, ತಹಶೀಲ್ದಾರ್, ಸಿದ್ದಾಪುರ ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಾಗಿರುವ ಪ್ರತಿಕೂಲ ಷರಾಗಳನ್ನು "ಸಲಹಾತ್ಮಕ ಷರಾ" ಎಂದು ಪರಿಗಣಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1473

**ಎಂ. ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮಂಗಳೂರು ತಾಲ್ಲೂಕು ಕೋಟೆಕಾರ್ ಗ್ರಾಮದ ಸ. ನಂ. 315:2 (ಪಿ) ರಲ್ಲಿನ 2.00 ಎಕ್ರೆ ವಿಸ್ತೀರ್ಣ ಜಾಗವನ್ನು ವಸತಿ ವಲಯ ಮತ್ತು ಪ್ರಸ್ತಾವಿತ ರಸ್ತೆ ಭೂ ಉಪಯೋಗದಿಂದ ವಾಣಿಜ್ಯ ವಲಯಕ್ಕೆ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು ಇವರ ಪತ್ರ ಸಂಖ್ಯೆ. ಮನಪ್ರಾ: ನಯೋಸ: 98: 2002-03, ದಿ: 7-3-2003 ಮತ್ತು 1-4-2003.
2. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಕಡತ ಸಂಖ್ಯೆ: ನಯೋ (17): 332: ಭೂ ಉಬ: 2003.

**ಪ್ರಸ್ತಾವನೆ:**

ಮೇಲೆ ಕ್ರ. ಸಂ. 1 ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು ಇವರು ಮಂಗಳೂರು ತಾಲ್ಲೂಕು ಕೋಟೆಕಾರ್ ಗ್ರಾಮದ ಸ. ನಂ. 315: 2 (ಪಿ) ರಲ್ಲಿನ 2.00 ಎಕ್ರೆ ವಿಸ್ತೀರ್ಣ ಜಾಗವನ್ನು ವಸತಿ ವಲಯ ಮತ್ತು ಪ್ರಸ್ತಾವಿತ ರಸ್ತೆ ಭೂ ಉಪಯೋಗದಿಂದ ವಾಣಿಜ್ಯ ವಲಯಕ್ಕೆ ಬದಲಾವಣೆ ಮಾಡಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರ. ಸಂ. 2 ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ನಗರದ ಯೋಜಿತ ಬೆಳವಣಿಗೆಯ ದೃಷ್ಟಿಯಿಂದ ಪ್ರಸ್ತಾವಿತ ರಸ್ತೆಯ ಪಂಕ್ತೀಕರಣವನ್ನು ಉಳಿಸಿಕೊಳ್ಳುವುದು ಅವಶ್ಯವಾಗಿರುವುದರಿಂದ ಮಂಗಳೂರು ತಾಲ್ಲೂಕು ಕೋಟೆಕಾರ್ ಗ್ರಾಮದ ಸ. ನಂ. 315: 2 (ಪಿ) ರಲ್ಲಿನ 2.00 ಎಕ್ರೆ ಜಮೀನಿನ ಪೈಕಿ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯಲ್ಲಿ ವಸತಿಗಾಗಿ ಕಾಯ್ದಿರಿಸಿರುವ ಜಮೀನಿನ ಸುಮಾರು 1.11 ಎಕರೆ ಕ್ಷೇತ್ರವನ್ನು ಮಾತ್ರ ವಾಣಿಜ್ಯ ಉದ್ದೇಶಕ್ಕಾಗಿ ಭೂ ಉಪಯೋಗ ಬದಲಾವಣೆ ಮಾಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 94 ಮೈಅಪ್ರಾ 2003, ಬೆಂಗಳೂರು, ದಿನಾಂಕ: 18ನೇ ನವೆಂಬರ್, 2003**

ಪ್ರಸ್ತಾವನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 14 (ಎ) (1) (ಎ) ಪ್ರಕಾರ ಪರಿಶೀಲಿಸಿ ಮಂಗಳೂರು ತಾಲ್ಲೂಕು ಕೋಟೆಕಾರ್ ಗ್ರಾಮದ ಸ. ನಂ. 315: 2 (ಪಿ) ರಲ್ಲಿನ 2.00 ಎಕ್ರೆ ಜಮೀನಿನ ಪೈಕಿ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯಲ್ಲಿ ವಸತಿಗಾಗಿ ಕಾಯ್ದಿರಿಸಿರುವ ಜಮೀನಿನ ಸುಮಾರು 1.11 ಎಕರೆ ಕ್ಷೇತ್ರವನ್ನು ಮಾತ್ರ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ವಸತಿ ವಲಯದಲ್ಲಿ ಪ್ರಸ್ತಾವಿತ ರಸ್ತೆ ಭೂ ಉಪಯೋಗದಿಂದ ವಾಣಿಜ್ಯ ಉದ್ದೇಶಕ್ಕಾಗಿ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ

1. ಪ್ರಸ್ತಾವಿತ ಜಮೀನಿನಲ್ಲಿ ಹಾದುಹೋಗುತ್ತಿರುವ ಪ್ರಸ್ತಾವಿತ 45.0 ಮೀ ಅಗಲದ ರಸ್ತೆಯನ್ನು ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯನ್ವಯ ಕಾಯ್ದಿರಿಸತಕ್ಕದ್ದು.
2. ಅರ್ಜಿದಾರರು ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರವು ವಿಧಿಸುವ ಶುಲ್ಕ ಪಾವತಿಸಿ ವಿನ್ಯಾಸಕ್ಕೆ ಅನುಮೋದನೆ ಪಡೆಯತಕ್ಕದ್ದು.
3. ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯಲ್ಲಿ ಸದರಿ ಭೂ ಉಪಯೋಗ ಬದಲಾವಣೆಯನ್ನು ಸೂಕ್ತವಾಗಿ ಅಳವಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1474

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ:** ಶ್ರೀಮತಿ ಷಹತಾಜ್, ನೋಟರಿ, ಗುಡಿಬಂಡೆ ಇವರ ಹೆಸರನ್ನು ನೋಟರಿ ರಿಜಿಸ್ಟರಿನಿಂದ ಶಾಶ್ವತವಾಗಿ ತೆಗೆದುಹಾಕುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲಾ 340 ಎಲ್‌ಸಿಎಲ್ 98, ದಿನಾಂಕ: 29-10-98.
2. ದಿನಾಂಕ: 26-5-01ರ ನಾಗರೀಕರು ಗುಡಿಬಂಡೆ ಕೋಲಾರ ಜಿಲ್ಲೆ ಇವರ ದೂರು ಮನವಿ.
3. ಸರ್ಕಾರಿ ಪತ್ರ ಸಂಖ್ಯೆ: ಲಾ 80 ಎಲ್ ಸಿ ಎಲ್ 2001, ದಿನಾಂಕ: 25-6-2001.
4. ನಾಗರೀಕರು, ಗುಡಿಬಂಡೆ ಇವರ ಮನವಿ ದಿನಾಂಕ: 15-6-2001.
5. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ದಿನಾಂಕ: 29-12-01.
6. ಸರ್ಕಾರಿ ಆದೇಶ ಸಂಖ್ಯೆ: ಲಾ 80 ಎಲ್‌ಸಿಎಲ್ 2001, ದಿನಾಂಕ: 8-3-2002.
7. ದಿನಾಂಕ: 14-6-02ರ ನೋಟರಿಯವರ ಮನವಿ.
8. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ದಿನಾಂಕ: 6-7-02.
9. ಸರ್ಕಾರದ ಸಮಸಂಖ್ಯೆಯ ಪತ್ರ ದಿನಾಂಕ: 28-2-03, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ದಿನಾಂಕ: 17-4-2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 29-10-1998ರ ಸರ್ಕಾರಿ ಆದೇಶ ಸಂಖ್ಯೆ: ಲಾ 340 ಎಲ್‌ಸಿಎಲ್ 98ರಲ್ಲಿ ಶ್ರೀಮತಿ ಷಹತಾಜ್, ಇವರನ್ನು ಕೋಲಾರ ಜಿಲ್ಲೆ ಗುಡಿಬಂಡೆ ಕಂದಾಯ ತಾಲ್ಲೂಕಿಗೆ ನೋಟರಿಯನ್ನಾಗಿ ನೇಮಿಸಿ ದಿನಾಂಕ: 29-10-1998 ರಿಂದ ಮೂರು ವರ್ಷಗಳ ಅವಧಿಗೆ ನೋಟರಿಯಾಗಿ ಕರ್ತವ್ಯ ನಿರ್ವಹಿಸುವಂತೆ ವೃತ್ತಿ ಪ್ರಮಾಣ ಪತ್ರ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 26-5-2001ರ ಮನವಿಯಲ್ಲಿ ಗುಡಿಬಂಡೆಯ ಕೆಲವು ನಾಗರೀಕರು ಸದರಿ ನೋಟರಿಯವರು ಪ್ರಮಾಣ ಪತ್ರವನ್ನು ಪ್ರಮಾಣೀಕರಿಸಲು ಹೆಚ್ಚು ಫೀ ವಸೂಲು ಮಾಡುತ್ತಾರೆಂದು, ಸ್ಟಾಂಪ್ ಹಚ್ಚುತ್ತಿಲ್ಲವೆಂದು, ಪಡೆದಿರುವ ಫೀಗೆ ರಶೀದಿಯನ್ನು ನೀಡುವುದಿಲ್ಲವೆಂದು ದೂರು ಸಲ್ಲಿಸಿದ್ದು ಆ ಬಗ್ಗೆ ಮೇಲೆ ಓದಲಾದ ಕ್ರಮಾಂಕ (3)ರ ಸರ್ಕಾರಿ ಪತ್ರದಲ್ಲಿ ನೋಟರಿಯವರ ಲಿಖಿತ ಹೇಳಿಕೆ ಕೋರಲಾಯಿತು.

ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ: 15-6-2001ರ ಮನವಿಯಲ್ಲಿ ಗುಡಿಬಂಡೆಯ ನಾಗರೀಕರು ತಾವು ದಿನಾಂಕ: 26-5-2001ರಂದು ಸಲ್ಲಿಸಿದ ಆಪಾದನೆಗಳು ಸುಳ್ಳೆಂದು ಅದನ್ನು ತಾವು ಯಾವುದನ್ನು ನಂಬಬಾರದೆಂದು, ತಿಳಿಸಿ ಸದರಿ ದೂರನ್ನು ವಾಪಸ್ಸು ಪಡೆದಿರುವುದಾಗಿ ತಿಳಿಸಿರುತ್ತಾರೆ. ಆದರೆ ದಿನಾಂಕ: 29-12-2001ರ ಪತ್ರದಲ್ಲಿ ಜಿಲ್ಲಾ ಸತ್ರ ನ್ಯಾಯಾಧೀಶರು ಸದರಿ ನೋಟರಿಯವರು ನೋಟರಿ ಕಾಯ್ದೆ ಮತ್ತು ನಿಯಮಗಳಿಗೆ ವಿರುದ್ಧವಾಗಿ ವರ್ತಿಸುತ್ತಾರೆಂದು ವರದಿ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (6) ದಿನಾಂಕ: 8-3-2002 ರ ಸರ್ಕಾರಿ ಆದೇಶ ಸಂಖ್ಯೆ: ಲಾ 80 ಎಲ್‌ಸಿಎಲ್ 2001 ರ ಆದೇಶದಲ್ಲಿ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಕೋಲಾರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ವರದಿ ನೀಡುವಂತೆ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (7)ರ ದಿನಾಂಕ: 14-6-2002ರ ಮನವಿಯಲ್ಲಿ ನೋಟರಿಯವರು ತಮ್ಮ ವೃತ್ತಿ ಪ್ರಮಾಣ ಪತ್ರವನ್ನು ದಿನಾಂಕ: 29-10-2001ರಿಂದ ನವೀಕರಿಸುವಂತೆ ಕೋರಿ ಸುಮಾರು 8 ತಿಂಗಳು ತಡವಾಗಿ ಪ್ರಸ್ತಾವನೆ ಸಲ್ಲಿಸಿದ್ದು ಜಿಲ್ಲಾ ಸತ್ರ ನ್ಯಾಯಾಧೀಶರು ದಿನಾಂಕ: 6-7-2002ರ ಪತ್ರದಲ್ಲಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ ಮತ್ತು ನೋಟರಿಯವರು ರಿಜಿಸ್ಟರ್‌ಗಳನ್ನು ಕ್ರಮಬದ್ಧವಾಗಿ ಇಟ್ಟಿಲ್ಲವೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (9)ರ ದಿನಾಂಕ: 28-2-2003ರ ಸರ್ಕಾರಿ ಪತ್ರದಲ್ಲಿ ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಂಡ ನಂತರವೂ ನೋಟರಿ ಕರ್ತವ್ಯ ನಿರ್ವಹಿಸಿರುವರೇ ಇಲ್ಲವೇ ಎಂಬ ಬಗ್ಗೆ ಸ್ಪಷ್ಟ ಮಾಹಿತಿ ನೀಡುವಂತೆ ಕೋರಿದ್ದರ ಹಿನ್ನೆಲೆಯಲ್ಲಿ, ಮೇಲೆ

ಓದಲಾದ ಕ್ರಮಾಂಕ (10)ರ ದಿನಾಂಕ: 17-4-2003ರ ಪತ್ರದಲ್ಲಿ ಸದರಿ ನೋಟರಿಯವರು ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಂಡ ದಿನಾಂಕ: 29-10-2001ರ ನಂತರವೂ ಜೂನ್ 2002ರವರೆಗೆ ನೋಟರಿ ಕರ್ತವ್ಯ ನಿರ್ವಹಿಸಿರುವುದು ಕಂಡು ಬಂದಿದೆಯೆಂದು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರು ವರದಿ ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಸದರಿ ನೋಟರಿಯವರು ನೋಟರಿ ಕಾಯ್ದೆ 9(1) ನ್ನು ಉಲ್ಲಂಘಿಸಿರುವುದು ಅಂದರೆ ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಂಡ ನಂತರವೂ ನೋಟರಿ ಕಾರ್ಯನಿರ್ವಹಿಸಿರುವುದು ದೃಢಪಟ್ಟಿರುವ ಹಿನ್ನಲೆಯಲ್ಲಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 80 ಎಲ್‌ಸಿ ಎಲ್ 2001, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2003**

ಶ್ರೀಮತಿ ಷಹತಾಜ್, ನೋಟರಿ, ಗುಡಿಬಂಡೆ, ಕೋಲಾರ ಜಿಲ್ಲೆ ಇವರ ವೃತ್ತಿ ಪ್ರಮಾಣ ಪತ್ರದ ಅವಧಿಯು ದಿನಾಂಕ: 29-10-2001ಕ್ಕೆ ಅಂತ್ಯಗೊಂಡಿದ್ದು ನವೀಕರಣ ಪ್ರಮಾಣ ಪತ್ರ ಪಡೆಯದೇ ದಿನಾಂಕ: 29-10-2001ರಿಂದ ಜೂನ್ 2002ರವರೆಗೆ ನೋಟರಿ ಕರ್ತವ್ಯ ನಿರ್ವಹಿಸಿರುವುದು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವರದಿಯಿಂದ ದೃಢಪಟ್ಟಿದ್ದು ನೋಟರಿ ಕಾಯ್ದೆ 9(1) ನ್ನು ಉಲ್ಲಂಘಿಸಿರುವುದು ದೃಢಪಟ್ಟಿರುತ್ತದೆ. ಆದರಿಂದ ನೋಟರಿ ನಿಯಮಾವಳಿಗಳು 1956ರ ನಿಯಮ 13 (12) (ಬಿ) (1) ರೀತ್ಯ ಸದರಿ ನೋಟರಿಯವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1475 **ಜಿ. ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ದುರ್ಗಸಿಂಹ ಮ್ಯಾಗೇರಿ, ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖೆ ವಿಚಾರಣೆ- ದಂಡನೆ ವಿಧಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್: ಸಿಶಾ-2/ 300/ 98-99 ದಿನಾಂಕ: 28-8-2000, 30-9-2000 ಮತ್ತು 31-1-2001.
2. ಶ್ರೀ ದುರ್ಗಸಿಂಹ ಮ್ಯಾಗೇರಿಯವರಿಗೆ ಜಾರಿ ಮಾಡಲಾದ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 187 ಪಿಪಿಇ 2000, ದಿನಾಂಕ: 19-2-2001.
3. ಶ್ರೀ ದುರ್ಗಸಿಂಹ ಮ್ಯಾಗೇರಿ ಇವರ ಲಿಖಿತ ಹೇಳಿಕೆ ದಿನಾಂಕ: 2-3-2001.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸೇಇ ವಿ 96 ದಿನಾಂಕ: 24-4-1996.
5. ಸರ್ಕಾರದ ಆದೇಶ ಸಂಖ್ಯೆ: ಲಾ 187 ಪಿ ಪಿ ಇ 2000, ದಿನಾಂಕ: 7-4-2001.
6. ವಿಚಾರಣಾ ಪ್ರಾಧಿಕಾರದ ವಿಚಾರಣಾ ವರದಿ ದಿನಾಂಕ: 5-9-2002.
7. ಸರ್ಕಾರದ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ : ಲಾ 187 ಪಿಪಿಇ 2000, ದಿನಾಂಕ: 1-2-2003.
8. ಶ್ರೀ ದುರ್ಗಸಿಂಹ ಮ್ಯಾಗೇರಿ ರವರ ಅಹವಾಲು ದಿನಾಂಕ: 27-02-2003.

**ಪ್ರಸ್ತಾವನೆ:**

ಶ್ರೀ ದುರ್ಗಸಿಂಹ ಮ್ಯಾಗೇರಿ, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ಶ್ರೀ ಶ್ಯಾಮಸುಂದರ ರೆಡ್ಡಿ ಬಿನ್ ದಿ: ರಾಮರೆಡ್ಡಿ, ಇವರನ್ನು ಅನುಕಂಪದ ಆಧಾರದನ್ವಯ, ಸಹಾಯಕ ಸರ್ಕಾರಿ ಅಭಿಯೋಜಕರ ಕಚೇರಿ, ಗುಡಿಬಂಡೆಯಲ್ಲಿ ಖಾಲಿಯಿರುವ ದಲಾಯತ್ ಹುದ್ದೆಗೆ ನೇಮಕಾತಿ ಮಾಡಬೇಕೆಂದು ಅಭಿಯೋಗ ನಿರ್ದೇಶಕರು ನೀಡಿದ್ದ ನಿರ್ದೇಶನವನ್ನು ಉಲ್ಲಂಘಿಸಿ ಗುಡಿಬಂಡೆಗೆ ಬದಲಾಗಿ ಶ್ರೀನಿವಾಸಪುರದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ನೇಮಕ ಮಾಡಿರುತ್ತಾರೆ. ಹಾಗೂ ಸದರಿ ಶ್ರೀ ಶ್ಯಾಮಸುಂದರ ರೆಡ್ಡಿರವರಿಗೆ ದಿನಾಂಕ: 15-5-2000ರಂದು ನೇಮಕಾತಿ ಆದೇಶ ನೀಡಿರುತ್ತಾರೆ. ಅದರಂತೆ ಅವರು ದಿನಾಂಕ: 29-5-2000ರೊಳಗೆ ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಈ ಸಂಬಂಧ ಕೆ. ಸಿ. ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳು 18 (1)ನ್ನು ಉಲ್ಲಂಘಿಸಿರುತ್ತಾರೆ. ಹಾಗೂ ನಿರ್ದೇಶಕರ ಕಚೇರಿ ಆದೇಶವನ್ನು ಪಾಲಿಸದೇ ತಮ್ಮ ಮನಬಂದಂತೆ ವರ್ತಿಸಿ ಕೆ. ಸಿ. ಎಸ್. (ನಡತೆ) ನಿಯಮಾವಳಿ 1966ರ ನಿಯಮ 3 (1)ರ ಉಪನಿಯಮ (11)ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಸತ್ಯವೆಂದು ಕಂಡು ಬಂದಿರುವುದರಿಂದ ಆರೋಪಿತರಾದ ಶ್ರೀ ದುರ್ಗಸಿಂಹ ಮ್ಯಾಗೇರಿರವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರವನ್ನು ಕೋರಿದ್ದರು.

ಶ್ರೀ ದುರ್ಗಸಿಂಹ ಮ್ಯಾಗೇರಿ, ಇವರ ವಿರುದ್ಧದ ಆಪಾದನೆಗಳ ಬಗ್ಗೆ ಸತ್ಯಾಂಶ ತಿಳಿಯುವ ಸಲುವಾಗಿ ಕರ್ನಾಟಕ ಸರ್ಕಾರವು ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ 1957ರ ಕೆ. ಸಿ. ಎಸ್. (ಸಿಸಿಎ) ನಿಯಮಾವಳಿ ನಿಯಮ 11ರ ಮೇರೆಗೆ ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದೋಷಾರೋಷಣಾ ಪಟ್ಟಿ ಅನುಬಂಧ-1ರಿಂದ 4ರೊಂದಿಗೆ ದಿನಾಂಕ: 19-2-2001ರಂದು ಆರೋಪಿತರಿಗೆ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಶ್ರೀ ದುರ್ಗಸಿಂಹ ಮ್ಯಾಗೇರಿಯವರು ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದರಿಂದ ಸದರಿಯವರ ಮೇಲಿನ ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಮೇಲೆ ಓದಲಾದ ಕ್ರಮಾಂಕ (4)ರನ್ವಯ ವಿಚಾರಣಾ ಪ್ರಾಧಿಕಾರವನ್ನು ಮೇಲೆ ಓದಲಾದ ಕ್ರಮಾಂಕ (5)ರಲ್ಲಿ ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಮೇಲ್ಕಂಡ ಸರ್ಕಾರದ ಆದೇಶದಂತೆ ವಿಚಾರಣಾ ಪ್ರಾಧಿಕಾರವು ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಮೇಲೆ ಓದಲಾದ ಕ್ರಮಾಂಕ (6)ರಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಶ್ರೀ ದುರ್ಗಸಿಂಹ ಮ್ಯಾಗೇರಿಯವರ ಮೇಲಿನ 4 ಆಪಾದನೆಗಳಲ್ಲಿ 1 ಮತ್ತು 3ನೇ ಆಪಾದನೆಗಳು ಸಾಬೀತಾಗಿರುವುದಿಲ್ಲ. ಆದರೆ 2 ಮತ್ತು 4ನೇ ಆಪಾದನೆಗಳು ಸಾಬೀತಾಗುತ್ತವೆ ಎಂಬ ಅಭಿಪ್ರಾಯವನ್ನು ವಿಚಾರಣಾಧಿಕಾರಿಯವರು ವ್ಯಕ್ತಪಡಿಸಿರುತ್ತಾರೆ. ವಿಚಾರಣಾ ವರದಿಯನ್ನು ಆಧರಿಸಿ 1957ರ ಕೆ.ಸಿ.ಎಸ್. (ಸಿಸಿಎ)

ನಿಯಮಾವಳಿ ನಿಯಮದನ್ವಯ ತಮ್ಮ ವಿರುದ್ಧ ಶಿಸ್ತು ಕ್ರಮ ಜರುಗಿಸಬಾರದೇಕೆಂಬ ಬಗ್ಗೆ ಅಹವಾಲನ್ನು ಲಿಖಿತವಾಗಿ ಸಲ್ಲಿಸಲು ಕಾಲಾವಕಾಶ ನೀಡಿ ಮೇಲ್ಕಂಡ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದಿನಾಂಕ: 1-2-2003ರಂದು ಶ್ರೀ ದುರ್ಗಸಿಂಹ ಮ್ಯಾಗೇರಿಯವರಿಗೆ ಮೇಲೆ ಓದಲಾದ ಕ್ರಮಾಂಕ (7)ರಲ್ಲಿ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (8)ರಲ್ಲಿ ಶ್ರೀ ದುರ್ಗಸಿಂಹ ಮ್ಯಾಗೇರಿಯವರು ತಮ್ಮ ಲಿಖಿತ ಅಹವಾಲನ್ನು ಸರ್ಕಾರಕ್ಕೆ ಸಲ್ಲಿಸಿ ತಮ್ಮ ಮೇಲಿನ ಆರೋಪ-2 ಮತ್ತು ಆರೋಪ-4 ಸಾಬೀತಾಗಿರುತ್ತವೆ ಎಂಬ ವಿಚಾರಣಾ ಪ್ರಾಧಿಕಾರದ ಅಭಿಪ್ರಾಯವನ್ನು ಅಲ್ಲಗಳೆದು ತಮ್ಮ ಅಹವಾಲನ್ನು ಮತ್ತೊಮ್ಮೆ ಪರಿಶೀಲಿಸಿ ಆಪಾದನೆಗಳನ್ನು ತಳ್ಳಿಹಾಕಬೇಕಾಗಿ ವಿನಂತಿಸಿಕೊಂಡಿರುತ್ತಾರೆ.

ಸರ್ಕಾರಕ್ಕೆ ಮೇಲೆ ಓದಲಾದ ಕ್ರಮಾಂಕ (6)ರ ವಿಚಾರಣಾ ಪ್ರಾಧಿಕಾರದ ವಿಚಾರಣಾ ವರದಿಯನ್ನು ಮತ್ತು ಶ್ರೀ ದುರ್ಗಸಿಂಹ ಮ್ಯಾಗೇರಿಯವರು ಮೇಲೆ ಓದಲಾದ ಕ್ರಮಾಂಕ (8)ರಲ್ಲಿ ಸಲ್ಲಿಸಿರುವ ಲಿಖಿತ ಅಹವಾಲನ್ನು ಸಮಗ್ರವಾಗಿ ಹಾಗೂ ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 187 ಪಿಪಿಇ 2000, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2003**

ಶ್ರೀ ದುರ್ಗಸಿಂಹ ಮ್ಯಾಗೇರಿ, ಹಿಂದಿನ ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ಹಾಲಿ 5ನೇ ಅಪರ ಸರ್ಕಾರಿ ಅಭಿಯೋಜಕರು ಮೆಯೋಹಾಲ್, ಬೆಂಗಳೂರು ನಗರ ಇವರ ಮೇಲಿದ್ದ 2ನೇ ಮತ್ತು 4ನೇ ಆರೋಪಗಳು ಸಾಬೀತಾಗಿರುವುದರಿಂದ ಕೆ. ಸಿ. ಎಸ್. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 8ರ ಉಪ ನಿಯಮ (111) ರನ್ವಯ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ನಂತರದ ವೇತನಾ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯುವ ಶಿಕ್ಷೆ ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1476

**ಜಿ. ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಗದಗ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿನ ಅಕ್ರಮಗಳಿಗೆ ಕಾರಣರಾದ ಶ್ರೀ ಸಿ.ಬಿ. ಕುಳಲಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಎನ್. ಡಿ. ತಿಮ್ಮಪ್ಪ ಗೌಡರ್, ಪ್ರಥಮ ದರ್ಜೆ ಉಗ್ರಾಣಪಾಲಕ (ನಿವೃತ್ತ) ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಮಂಡನಾಧಿಕಾರಿಗಳನ್ನು ಬದಲಾಯಿಸುವ ಬಗ್ಗೆ- ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 271 ಇಎನ್‌ಕ್ಯೂ 96, ದಿ: 26-4-03.
2. ಶ್ರೀ ಬಿ. ಎಲ್. ಶ್ರೀಕಂಠಯ್ಯ, ನಿವೃತ್ತ ನ್ಯಾಯಾಧೀಶರು, ಹಾಗೂ ವಿಚಾರಣಾಧಿಕಾರಿಗಳು ಇವರ ದಿ: 24-9-03 ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಗದಗ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿನ ಅಕ್ರಮಗಳಿಗೆ ಕಾರಣರಾದ ಶ್ರೀ ಸಿ. ಬಿ. ಕುಳಲಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಎನ್. ಡಿ. ತಿಮ್ಮಪ್ಪಗೌಡರ್, ಪ್ರಥಮ ದರ್ಜೆ ಉಗ್ರಾಣಪಾಲಕ (ನಿವೃತ್ತ) ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಬಿ.ಎಲ್. ಶ್ರೀಕಂಠಯ್ಯ, ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್, ಗದಗ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಪ್ರಕರಣದಲ್ಲಿ ವಿಚಾರಣಾಧಿಕಾರಿಯಾಗಿ ನೇಮಕಗೊಂಡಿರುವ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಕಗೊಂಡಿದ್ದ ಉಪಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್, ಗದಗ್ ಇವರು ಜಿಲ್ಲಾ ಪಂಚಾಯತ್‌ನ ಹಲವು ಸಭೆಗಳಲ್ಲಿ ಭಾಗವಹಿಸಬೇಕಾಗಿದ್ದರಿಂದ ಅವರು ಪ್ರಕರಣವನ್ನು ಮಂಡಿಸಲು ಸಾಧ್ಯವಾಗದೆ ಹಲವು ಬಾರಿ ವಿಚಾರಣೆಯನ್ನು ಮುಂದೂಡ ಬೇಕಾಯಿತೆಂದು ಹಾಗೂ ಈ ಮಧ್ಯೆ ಅವರು ವರ್ಗಾವಣೆ ಹೊಂದಿರುವುದರಿಂದ ಪ್ರಭಾರಿ ಉಪಕಾರ್ಯದರ್ಶಿ (ಆಡಳಿತ)ರವರು ಮಂಡನಾಧಿಕಾರಿಯಾಗಿ ಕೆಲಸ ನಿರ್ವಹಿಸಲುಬಾರದೆಂದು ತಿಳಿಸುತ್ತಾ ಇಂತಹ ಸನ್ನಿವೇಶದಲ್ಲಿ ಗದಗ್ ಜಿಲ್ಲಾ ಪಂಚಾಯತ್‌ನ ಪ್ರಾದೇಶಿಕ ಯೋಜನಾಧಿಕಾರಿ (Regional planner) ಇವರನ್ನು ಪ್ರಕರಣದಲ್ಲಿನ ಮಂಡನಾಧಿಕಾರಿಯೆಂದು ನೇಮಿಸಲು ಕೋರಿರುತ್ತಾರೆ. ಸರ್ಕಾರವು ವಿಚಾರಣಾಧಿಕಾರಿಗಳ ಮನವಿಯನ್ನು ಪರಿಶೀಲಿಸಿ ಮಂಡನಾಧಿಕಾರಿಗಳನ್ನು ಬದಲಾಯಿಸಲು ನಿರ್ಣಯಿಸಿದೆ. ಕಾರಣ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 271 ಇಎನ್‌ಕ್ಯೂ 96 ಬೆಂಗಳೂರು, ದಿನಾಂಕ: 17ನೇ ನವೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಗದಗ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿನ ಅಕ್ರಮಗಳಿಗೆ ಕಾರಣರಾದ ಶ್ರೀ ಸಿ.ಬಿ. ಕುಳಲಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಎನ್. ಡಿ. ತಿಮ್ಮಪ್ಪಗೌಡರ್, ಪ್ರಥಮ ದರ್ಜೆ ಉಗ್ರಾಣಪಾಲಕ (ನಿವೃತ್ತ) ಇವರ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 (5)ರನ್ವಯ ಉಪಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್, ಗದಗ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿರುವ ಆದೇಶವನ್ನು ಹಿಂಪಡೆದು ಗದಗ್ ಜಿಲ್ಲಾ ಪಂಚಾಯತ್‌ನ ಪ್ರಾದೇಶಿಕ ಯೋಜನಾಧಿಕಾರಿ (Regional planner)ರವರನ್ನು ಪ್ರಕರಣದಲ್ಲಿನ ಮಂಡನಾಧಿಕಾರಿಯೆಂದು ಸರ್ಕಾರವು ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1479

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ವಿ. ಕಲ್ಲಪ್ಪ, ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ - ಆದೇಶ

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ದಿನಾಂಕ: 19-11-2003 ರ ವರದಿ.

**ಆದೇಶ ಸಂಖ್ಯೆ: ಗ್ರಾಅಪ 28 ಇಎನ್‌ಕ್ಯೂ 03, ದಿನಾಂಕ: 25ನೇ ನವೆಂಬರ್ 2003**

ಶ್ರೀ ವಿ. ಕಲ್ಲಪ್ಪ, ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರು ಕೊಪ್ಪಳ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗಕ್ಕೆ ಬೇಕಾಗುವ ಸಾಮಗ್ರಿಗಳನ್ನು 2003ನೇ ಸಾಲಿನ ಮೇ ತಿಂಗಳೊಳಗೆ ಖರೀದಿ ಮಾಡಲು ಸಕಾಲದಲ್ಲಿ ಟೆಂಡರ್ ಕರೆಯದೆ ಸಾಮಗ್ರಿಗಳ ಸಂಗ್ರಹಣೆಗೆ ತೊಂದರೆಯಾಗಿ ಅಭಿವೃದ್ಧಿ ಕಾಮಗಾರಿಗಳು ಅನುಷ್ಠಾನಗೊಳ್ಳಲು ಸಾಧ್ಯವಾಗದೇ ಇರುವುದು. 2003-2004 ನೇ ಸಾಲಿನ ಟೆಂಡರ್‌ಗಳಲ್ಲಿ ದರಪಟ್ಟಿ ಅಂಗೀಕರಿಸಲು ಟೆಂಡರ್‌ದಾರರು ನಮೂದಿಸಿದ ದರಗಳ ಬದಲು ಬೇರೆ ದರಗಳನ್ನು ತುಲನಾತ್ಮಕ ಪಟ್ಟಿ ತಯಾರಿಕೆಯಲ್ಲಿ ನಮೂದಿಸಿ ಸ್ವಂತ ಲಾಭಕ್ಕಾಗಿ ಸುಳ್ಳು ದಾಖಲೆಗಳನ್ನು ಅಂಗೀಕರಿಸಲು ಜಿಲ್ಲಾ ಪಂಚಾಯಿತಿಗೆ ಸಲ್ಲಿಸಿರುವುದು. ಈ ಬಗ್ಗೆ ಕೇಳಲಾದ ವಿವರಣೆಗೆ ಈವರೆಗೂ ಉತ್ತರಿಸದಿರುವುದು, ಲೆಕ್ಕ ಶೀರ್ಷಿಕೆ 2515, 2702, 3054 ರಡಿ ಬಿಡುಗಡೆಯಾದ ಅನುದಾನಕ್ಕಿಂತ ಒಟ್ಟು 26.33 ಲಕ್ಷ ರೂ.ಗಳನ್ನು ಹೆಚ್ಚುವರಿಯಾಗಿ ಖರ್ಚು ಮಾಡಿರುವುದು. ಕ್ರಿಯಾ ಯೋಜನೆಗಳ ಪ್ರಕಾರ ಸಲ್ಲಿಸಲಾದ ಅಂದಾಜು ಪಟ್ಟಿಗಳಿಗೆ ಮೂರ್ನಾಲ್ಕು ತಿಂಗಳುಗಳಿಂದ ತಾಂತ್ರಿಕ ಅನುಮೋದನೆ ನೀಡದೆ 478 ಅಂದಾಜು ಪಟ್ಟಿಗಳನ್ನು ವೈಯಕ್ತಿಕ ಲಾಭಕ್ಕಾಗಿ ಬೀಗ ಹಾಕಿ ಇಟ್ಟುಕೊಂಡಿರುವುದು. ಕಾಮಗಾರಿಗಳಿಗೆ ಸಕಾಲದಲ್ಲಿ ಟೆಂಡರ್ ಕರೆಯದೆ ಇರುವುದು, ಹಣವಿದ್ದರೂ ಸಹ ಬಿಲ್ಲುಗಳನ್ನು ಸಕಾಲದಲ್ಲಿ ಪಾವತಿ ಮಾಡದೇ ಮುಂದಿನ ಕಂತುಗಳ ಅನುದಾನ ಪಡೆಯಲು ತೊಂದರೆಯಾಗುತ್ತಿರುವುದು, ಮೇಲಾಧಿಕಾರಿಗಳ ಅನುಮತಿ ಇಲ್ಲದೇ ಕೇಂದ್ರ ಸ್ಥಾನವನ್ನು ಬಿಡುತ್ತಿರುವುದು. ದಿನಾಂಕ: 22-10-2003ರಂದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಇವರ ಕಛೇರಿಯ ಅನಿರೀಕ್ಷಿತ ತಪಾಸಣೆ ನಡೆಸಿದಾಗ ಅನೇಕ ಲೋಪದೋಷಗಳು ಕಂಡುಬಂದಿರುವುದು ಮೇಲಿನಂತೆ ತಮ್ಮ ಅಧಿಕಾರವನ್ನು ಉದ್ದೇಶಪೂರ್ವಕವಾಗಿ ದುರುಪಯೋಗಪಡಿಸಿಕೊಂಡು ಗುರುತರವಾದ ಲೋಪಗಳನ್ನು/ ಅಕ್ರಮಗಳನ್ನು ಎಸಗಿದ್ದಾರೆಂದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಕೊಪ್ಪಳ ಇವರು ಮೇಲೆ ಓದಲಾದ ದಿನಾಂಕ: 19-11-2003ರ ಪತ್ರದಲ್ಲಿ ವರದಿ ಮಾಡಿರುವುದರಿಂದಲೂ;

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರು ತಮ್ಮ ಪತ್ರದಲ್ಲಿ ಪ್ರಸ್ತಾಪಿಸಿರುವ ಆಪಾದನೆಗಳು ಶ್ರೀ ವಿ. ಕಲ್ಲಪ್ಪ, ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಕೊಪ್ಪಳ ಇವರು ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಗೆ ಸಂಬಂಧಿಸಿರುವುದರಿಂದಲೂ ಮತ್ತು ಅವು ಅವರ ಕರ್ತವ್ಯಗಳ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂಥವುಗಳಾಗಿರುವುದರಿಂದಲೂ

ವಿಷಯ, ಸಂದರ್ಭ, ಸನ್ನಿವೇಶಗಳನ್ನು ಮತ್ತು ಈಗ ಒದಗಿ ಬಂದಿರುವ ದಾಖಲೆಗಳನ್ನು ಪರಿಗಣಿಸಲಾಗಿ ಶ್ರೀ ವಿ. ಕಲ್ಲಪ್ಪ, ಕಾರ್ಯಪಾಲಕ ಇಂಜಿನಿಯರ್, ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳಲು ನಿರ್ಧರಿಸಿರುವುದರಿಂದ ಮತ್ತು ಇವರನ್ನು ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ಸರ್ಕಾರವು ಅಭಿಪ್ರಾಯಪಟ್ಟಿರುವುದರಿಂದಲೂ;

ಆದ್ದರಿಂದ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ -10ರ ಉಪ ನಿಯಮ 1 (ಡಿ) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ. ಕಲ್ಲಪ್ಪ, ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್, ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿಡಲು ಸರ್ಕಾರವು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು ಹಾಗೂ ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯ ಲಿಖಿತ ಅನುಮತಿ ಇಲ್ಲದೇ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1477

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಸಾಗರ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಸಿಮೆಂಟ್ ಇನ್ನಿತರೆ ಉಗ್ರಾಣ ಸಾಮಗ್ರಿಗಳ ಕೊರತೆ ಶ್ರೀ ಕೆ. ಧರ್ಮಪ್ಪ, ಅಂದಿನ ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಸಾಗರ ಇವರ ವಿರುದ್ಧ ಇಲಾಖಾ ವಿಚಾರಣೆ -ದಂಡನೆ ವಿಧಿಸುವ ಬಗ್ಗೆ -ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ಪತ್ರ ಸಂ: ಜಿಪಂಶಿ: ಸಿಬ್ಬಂದಿ (4): ವಿವ: 54: 97-98: ದಿ: 6-11-97 ಮತ್ತು 6-2-98.
2. ಕಾರಣ ಕೇಳುವ ನೋಟಿಸ್ ಸಂ: ಗ್ರಾಅಪ 9 ಇಎನ್‌ಕ್ಯೂ 98 ದಿ: 4-9-98.
3. ಆದೇಶ ಸಂ: ಗ್ರಾಅಪ 9 ಇಎನ್‌ಕ್ಯೂ 98 ದಿ: 22-12-99.
4. ವಿಚಾರಣಾಧಿಕಾರಿಗಳ ದಿ: 10-6-02 ವಿಚಾರಣಾ ವರದಿ.
5. 2ನೇ ಕಾರಣ ಕೇಳುವ ನೋಟಿಸ್ ಸಂ: ಗ್ರಾಅಪ 9 ಇಎನ್‌ಕ್ಯೂ 98, ದಿ: 20-8-03.
6. ಶ್ರೀ ಕೆ. ಧರ್ಮಪ್ಪ, ಅಂದಿನ ದ್ವಿತೀಯ ದರ್ಜೆ ಸಹಾಯಕ ಇವರ ದಿ: 8-10-02 ರ ರಕ್ಷಣಾ ಹೇಳಿಕೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರು ಸಾಗರ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗದ ದಾಸ್ತಾನಿನ ಅಸಮರ್ಪಕ ನಿರ್ವಹಣೆಯಿಂದ ಸುಮಾರು 12 ಲಕ್ಷ ರೂ.ಗಳಷ್ಟು ಮೌಲ್ಯದ ಸಿಮೆಂಟ್ ಮತ್ತು ಇನ್ನಿತರೆ ಉಗ್ರಾಣ ಸಾಮಗ್ರಿಗಳ ಕೊರತೆ ಕಂಡು ಬಂದಿದ್ದು, ಸದರಿ ಕೊರತೆಗೆ ಕಾರಣರಾದ ಶ್ರೀ ಹೆಚ್. ಬಿ. ಸೋಮಶೇಖರಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ಪ್ರಸ್ತುತ ನಿವೃತ್ತಿ ಹೊಂದಿರುತ್ತಾರೆ) ಮತ್ತು ಶ್ರೀ ಕೆ. ಧರ್ಮಪ್ಪ, ಅಂದಿನ ದ್ವಿತೀಯ ದರ್ಜೆ ಸಹಾಯಕ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲ್ಕಂಡ ಅಧಿಕಾರಿ (ನಿವೃತ್ತ) ನೌಕರರ ವಿರುದ್ಧ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ: 4-9-98ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪಪಟ್ಟಿ ಜಾರಿ ಮಾಡಿತ್ತು. ಸರ್ಕಾರದಿಂದ ಜಾರಿಗೊಳಿಸಿದ್ದ ಕಾರಣ ಕೇಳುವ ನೋಟಿಸ್‌ಗೆ ಆಪಾದಿತ ಅಧಿಕಾರಿ: ನೌಕರರು ಲಿಖಿತ ಹೇಳಿಕೆಯನ್ನು ಸಲ್ಲಿಸಿರಲಿಲ್ಲ. ಆಪಾದಿತ ಅಧಿಕಾರಿ: ನೌಕರರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದುದರಿಂದ ಸರ್ಕಾರದಿಂದ ಜಾರಿಗೊಳಿಸಿರುವ ಕಾರಣ ಕೇಳುವ ನೋಟಿಸ್‌ಗೆ ಅವರ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ, ಪ್ರಕರಣದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಜಿಲ್ಲಾಧಿಕಾರಿ, ಶಿವಮೊಗ್ಗ ಇವರನ್ನು ವಿಚಾರಣಾಧಿಕಾರಿಯನ್ನಾಗಿ, ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (4)ರಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಎಲ್ಲಾ ಆರೋಪಗಳು ಸಾಬೀತಾಗಿರುತ್ತವೆಂದು ವರದಿ ಮಾಡಿದ್ದು ಆಪಾದಿತರ ಮೇಲಿನ ಆರೋಪ ಮತ್ತು ಆ ಬಗ್ಗೆ ವಿಚಾರಣಾಧಿಕಾರಿಗಳ ವರದಿ ಈ ಕೆಳಕಂಡಂತೆ ಇದೆ.

**ಶ್ರೀ ಹೆಚ್. ಬಿ. ಸೋಮಶೇಖರಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್:**

**ಆಪಾದನೆ 1:**

ದಾಸ್ತಾನಿನಲ್ಲಿ ದಿ: 20-6-97ಕ್ಕೆ 5 ಚೀಲ ಸಿಮೆಂಟ್ ಇರಬೇಕಾಗಿದ್ದು ಅದರ ಬದಲಾಗಿ 25 ಚೀಲ ಇರುತ್ತದೆ. ದಿ: 24-6-97 ರಂದು ಸಂಬಂಧಪಟ್ಟವರ ಬೇಡಿಕೆ ಇಲ್ಲದಿದ್ದರೂ ಅನಧಿಕೃತವಾಗಿ ಸಿಮೆಂಟ್ ಖರ್ಚು ಹಾಕಲಾಗಿದೆ. ಹಾಗೂ ಸರ್ಕಾರದ ಸಾಮಗ್ರಿಗಳನ್ನು ದುರುಪಯೋಗಪಡಿಸಿಕೊಳ್ಳಲಾಗಿದೆ.

**ವಿಚಾರಣಾಧಿಕಾರಿಗಳ ವರದಿ**

ಆಪಾದಿತರು ಈ ಆರೋಪದ ಬಗ್ಗೆ ವಿವರಣೆ ನೀಡಲು ವಿಫಲರಾಗಿದ್ದು ಸದರಿಯವರ ಮೇಲಿನ ಈ ಕರ್ತವ್ಯ ಲೋಪದ ಆರೋಪ ಸಾಬೀತಾಗಿದೆ.

**ಆಪಾದನೆ 2:**

ಒಡ್ಡಿನಗದ್ದೆ ಪಿಕ್‌ಅಪ್ ನಿರ್ಮಾಣಕ್ಕಾಗಿ 570 ಸಿಮೆಂಟ್ ಚೀಲಕ್ಕೆ ಬದಲಾಗಿ 450 ಚೀಲ ಉಪಯೋಗಿಸಲಾಗಿದೆಯೆಂದು ತಿಳಿಸಿದ್ದು, ಕಾಮಗಾರಿಗೆ ಉಪಯೋಗಿಸಿದ ಸಿಮೆಂಟ್ ಮತ್ತು ಉಳಿದ ಸಿಮೆಂಟ್ ಬಗ್ಗೆ ಲೆಕ್ಕ ಪತ್ರ ನಿರ್ವಹಿಸದೆ, ಸಿಮೆಂಟನ್ನು ಆಯಾಯ ಕಾಮಗಾರಿಗೆ ವಿನಿಯೋಗಿಸದೆ ಬೇರೆ ಕಾಮಗಾರಿಗಳಿಗೆ ವಿನಿಯೋಗಿಸಿ ಕಾಮಗಾರಿಯ ಗುಣಮಟ್ಟ ಹಾಳಾಗಲು ಕಾರಣರಾಗಿ ಅಧಿಕಾರ ದುರುಪಯೋಗ, ದುರ್ನಡತೆ ಎಸಗಿದ್ದಾರೆ.

**ವಿಚಾರಣಾಧಿಕಾರಿಗಳ ವರದಿ**

ಜಿಲ್ಲಾ ಪಂಚಾಯತ್‌ನ ಪರಿಷತ್ ಕಾರ್ಯದರ್ಶಿಯವರು ಸ್ಥಳ ತನಿಖೆ ಮಾಡಿದಾಗ, ಅಲ್ಲಿ ಸಿಮೆಂಟ್ ಕೆಲಸ ನಡೆದಿರುವುದಿಲ್ಲವೆಂದು ಕೇವಲ ಮಣ್ಣಿನ ಕೆಲಸ ಮಾತ್ರ ನಡೆದಿದ್ದು, ಆಪಾದಿತರು ಒಡ್ಡಿನಗದ್ದೆ ಕಾಮಗಾರಿಗೆ 550 ಚೀಲ ಸಿಮೆಂಟ್ ಬಳಸದೆ ದುರುಪಯೋಗಪಡಿಸಿಕೊಂಡಿರುವರೆಂಬ ಆರೋಪ ಸಾಬೀತಾಗಿದೆ.

**ಆಪಾದನೆ 3:**

ದಿ: 24-5-97ರಂದು 400 ಚೀಲ ಸಿಮೆಂಟನ್ನು ತಮ್ಮ ಸ್ವಂತ ಹೆಸರಿನಲ್ಲಿ ಲೋಕೋಪಯೋಗಿ ಕೆಲಸಕ್ಕೆಂದು ಪಡೆದಿದ್ದು ಅದನ್ನು ಯಾವ ಕಾಮಗಾರಿಗೆ ಪಡೆಯಲಾಗಿದೆ ಮತ್ತು ಕಾಮಗಾರಿ ಮಂಜೂರಾತಿ ಆದೇಶ ವಿವರಗಳನ್ನು ನೀಡಿರುವುದಿಲ್ಲ. ಸದರಿ ಸಿಮೆಂಟ್‌ನ್ನು ದಿ: 23-7-97ರಂದು ಹಿಂದಿರುಗಿಸಿರುವುದಾಗಿ ದಾಖಲೆ ಬರೆಸಿದ್ದರೂ, ಅದರ ಸತ್ಯಾಸತ್ಯತೆ ಪ್ರಶ್ನಾರ್ಹವಾಗಿದ್ದು 400 ಚೀಲ ಸಿಮೆಂಟ್ ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಳ್ಳಲಾಗಿದೆ.

**ವಿಚಾರಣಾಧಿಕಾರಿಗಳ ವರದಿ:**

ಆಪಾದಿತರು ತಮ್ಮ ಹೆಸರಿನಲ್ಲಿ ಸಿಮೆಂಟ್ ಪಡೆದು ಲೋಕೋಪಯೋಗಿ ಇಲಾಖೆಗೆ ನೀಡಿರುವುದಾಗಿ ಮತ್ತು ದಿ: 23-7-97 ರಂದು ಹೊಂದಾಣಿಕೆ ಮಾಡಿರುವುದಾಗಿ ತಿಳಿಸಿದ್ದರೂ ಈ ಬಗ್ಗೆ ದಾಖಲೆಗಳನ್ನು ಹಾಜರುಪಡಿಸಿಲ್ಲ. 400 ಚೀಲ ಸಿಮೆಂಟ್ ದುರುಪಯೋಗದ ಮೊತ್ತ 53,560.00 ರೂ. ಗಳ ನಷ್ಟಕ್ಕೆ ಕಾರಣರಾಗಿದ್ದಾರೆಂಬ ಆರೋಪ ಸಾಬೀತಾಗಿದೆ.

**ಆಪಾದನೆ 4:**

ಉಪ ವಿಭಾಗದ ಮುಖ್ಯಸ್ಥರಾಗಿ ಪಿಡಬ್ಲ್ಯೂಡಿ ಮ್ಯಾನ್ಯುಯಲ್ ಪ್ರಕಾರ ಅಧೀನ ನೌಕರರು ದಾಸ್ತಾನು ವಹಿ ನಿರ್ವಹಿಸಿರುವುದನ್ನು ನೋಡಿಕೊಳ್ಳುವಲ್ಲಿ ವಿಫಲರಾಗಿ ಉಗ್ರಾಣದಲ್ಲಿನ ಲೆಕ್ಕಪತ್ರ ಪರಿಶೀಲಿಸದೆ ಲಕ್ಷಾಂತರ ರೂ.ಗಳ ಸಾಮಗ್ರಿಗಳು ಕಡಿಮೆ ಇದ್ದು, ಕರ್ತವ್ಯಲೋಪ ದುರ್ನಡತೆ ಎಸಗಿದ್ದಾರೆ.

**ವಿಚಾರಣಾಧಿಕಾರಿಗಳ ವರದಿ:**

ಉಪವಿಭಾಗದ ಕಾಮಗಾರಿ, ಸರ್ಕಾರದಿಂದ ಸರಬರಾಜಾದ ಸಾಮಗ್ರಿಗಳ ದಾಸ್ತಾನು ವಹಿ ಮತ್ತು ದಾಸ್ತಾನು ಮಳಿಗೆಯಲ್ಲಿರುವ ಸಾಮಗ್ರಿಗಳ ಭೌತಿಕ ತಪಾಸಣೆ ನಡೆಸದೆ, ಅರ್ಧವಾರ್ಷಿಕ ತಪಾಸಣೆ ನಡೆಸದೆ, ದಿ: 29-10-97ರ ಪಟ್ಟಿಯಂತೆ ಉಗ್ರಾಣದಲ್ಲಿ 12,39,962.60ರೂ.ಗಳ ಸಾಮಗ್ರಿಗಳು ಕಾಣೆಯಾಗಿದ್ದು ಸದರಿ ವ್ಯತ್ಯಾಸಕ್ಕೆ ಇವರು ಸಹಕಾರಿಯಾಗಿರುವುದು ಕಂಡು ಬರುವುದರಿಂದ ಈ ಆರೋಪ ಸಾಬೀತಾಗುತ್ತದೆ.

**ಶ್ರೀ ಕೆ. ಧರ್ಮಪ್ಪ, ಅಂದಿನ ದ್ವಿತೀಯ ದರ್ಜೆ ಸಹಾಯಕ**

**ಆಪಾದನೆ 1:**

ದಿ: 30-6-97ರಂದು ಉಗ್ರಾಣ ದಾಸ್ತಾನು ಪರಿಶೀಲಿಸಿದಾಗ ಇರಬೇಕಾಗಿದ್ದ 5 ಚೀಲ ಸಿಮೆಂಟ್ ಬದಲಾಗಿ 25 ಚೀಲ ಸಿಮೆಂಟಿದ್ದು, ಹೆಚ್ಚುವರಿ ಸಿಮೆಂಟಿಗೆ ಕಾರಣ ನೀಡಿರುವುದಿಲ್ಲ. ಹಾಗೂ ಶಾಖಾಧಿಕಾರಿಗಳಿಂದ ಬೇಡಿಕೆ ಇಲ್ಲದಿದ್ದರೂ, ಅವರ ಹೆಸರಿಗೆ ಇನ್‌ವಾಯ್ಸ್ ಹಾಕಿರುವುದು ಮತ್ತು ಶ್ರೀ ಟಿ. ನಾಗರಾಜ್, ಕಿರಿಯ ಇಂಜಿನಿಯರ್, ಇವರ ಹೆಸರಿನಲ್ಲಿ 300 ಚೀಲ ಸಿಮೆಂಟ್ ಖರ್ಚು ಹಾಕಿರುವ ಆರೋಪ.

**ವಿಚಾರಣಾಧಿಕಾರಿಗಳ ವರದಿ:**

ಆರೋಪಿಸಲಾದಂತೆ 20 ಚೀಲ ಸಿಮೆಂಟ್ ದಾಸ್ತಾನಿನಲ್ಲಿ ಹೆಚ್ಚಾಗಿರುವುದರಿಂದ ಇವರ ಕರ್ತವ್ಯಲೋಪ ಸಾಬೀತಾಗಿದೆ ಮತ್ತು ಶ್ರೀ ಟಿ. ನಾಗರಾಜ ಇವರು 100 ಚೀಲ ಸಿಮೆಂಟ್ ಪಡೆದಿದ್ದು ಉಳಿದ 200 ಚೀಲ ಸಿಮೆಂಟ್‌ನ್ನು ಕೋರಿಕೆ ಇಲ್ಲದೆ ವಿತರಣೆ ತೋರಿಸಿರುವುದರಿಂದ ಇವರ ಮೇಲಿನ ಅಧಿಕಾರ ದುರುಪಯೋಗದ ಆರೋಪ ಸಾಬೀತಾಗಿದೆ.

**ಆಪಾದನೆ 2:**

ದಿ: 24-5-97ರಂದು ಶ್ರೀ ಸೋಮಶೇಖರಪ್ಪ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಹೆಸರಿಗೆ 400 ಚೀಲ ಸಿಮೆಂಟ್ ಲೋಕೋಪಯೋಗಿ ಇಲಾಖೆಗೆ ಎಂದು ಇನ್‌ವಾಯ್ಸ್ ಹಾಕಲಾಗಿದ್ದು ಆ ಬಗ್ಗೆ ಲೋಕೋಪಯೋಗಿ ಇಲಾಖೆಯಿಂದ ಬೇಡಿಕೆ ಪತ್ರವಾಗಲಿ ಅಥವಾ ಅದನ್ನು ಪಡೆದಿದ್ದಕ್ಕೆ ಆ ಇಲಾಖೆಯಿಂದ ಸ್ವೀಕೃತಿಯನ್ನಾಗಲಿ ಪಡೆಯದೆ, ಸಿಮೆಂಟನ್ನು ದುರುಪಯೋಗಪಡಿಸಿಕೊಂಡಿರುವ ಆರೋಪ.

**ವಿಚಾರಣಾಧಿಕಾರಿಗಳ ವರದಿ:**

ಒಂದು ಇಲಾಖೆಯಿಂದ ಇನ್ನೊಂದು ಇಲಾಖೆಗೆ ಸಿಮೆಂಟ್ ವಿತರಿಸಲು ಸಂಬಂಧಪಟ್ಟ ಇಲಾಖೆಯ ಹೆಸರಿಗೆ ಇನ್‌ವಾಯ್ಸ್ ನೀಡಬೇಕಾಗಿದ್ದು ಹಾಗೇ ಮಾಡದೆ ಉಪ ವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಸಿಮೆಂಟ್ ವಿತರಿಸಿರುವುದು ನಿಯಮಕ್ಕೆ ವಿರುದ್ದವಾಗಿದ್ದು ಆಪಾದಿತರು ಇದಕ್ಕಾಗಿ ಸಹಾಯ ಮಾಡಿರುವುದರಿಂದ ಆರೋಪ ಸಾಬೀತಾಗಿದೆ.

**ಆಪಾದನೆ 3:**

ಉಗ್ರಾಣ ಕೆಲಸಗಳನ್ನು ಪಿಡಬ್ಲ್ಯೂಡಿ ಕೋಡ್: ಸ್ಟೋರ್ಸ್ ಮ್ಯಾನ್ಯುಯಲ್ ಪ್ರಕಾರ ನಿರ್ವಹಿಸದೆ ಕರ್ತವ್ಯಲೋಪ ಎಸಗಿರುವ ಆರೋಪ.

**ವಿಚಾರಣಾಧಿಕಾರಿಗಳ ವರದಿ:**

ದಾಸ್ತಾನಿನ ಭೌತಿಕ ಮತ್ತು ಪುಸ್ತಕ ಪ್ರಮಾಣದಲ್ಲಿ ವ್ಯತ್ಯಾಸವಿರುವುದರಿಂದ ಆರೋಪ ಸಾಬೀತಾಗಿದೆ.

**ಆಪಾದನೆ 4:**

ದಿ: 9-7-97ರವರೆಗಿನ ಉಗ್ರಾಣ ಲೆಕ್ಕಪತ್ರಗಳ ಪ್ರಕಾರ ಇರಬೇಕಾಗಿದ್ದ ಸಾಮಗ್ರಿಗಳಿಗಿಂತ 12,39,962.60ರೂ.ಗಳ ಸಾಮಗ್ರಿಗಳ ಕೊರತೆಯಿದ್ದು ಲೆಕ್ಕಪತ್ರ ಸರಿಯಾಗಿ ನಿರ್ವಹಿಸದೆ ಸರ್ಕಾರಕ್ಕೆ ಭಾರಿ ಮೊತ್ತದ ಲುಕ್ಸಾನ್ ಮಾಡಿ ದುರ್ನಡತೆ ಎಸಗಿದ್ದಾರೆ.

**ವಿಚಾರಣಾಧಿಕಾರಿಗಳ ವರದಿ:**

ಉಗ್ರಾಣ ಸಾಮಗ್ರಿಗಳ ಭೌತಿಕ ತಪಾಸಣೆ, ವಿತರಣೆ ಮತ್ತು ಇದಕ್ಕೆ ಸಂಬಂಧಿಸಿದ ವಹಿಗಳನ್ನು ಪಿಡಬ್ಲ್ಯೂಡಿ ಕೋಡ್ ಮತ್ತು ಸ್ಟೋರ್ಸ್ ಮ್ಯಾನ್ಯುಯಲ್ ಪ್ರಕಾರ ನಿರ್ವಹಿಸದೆ ಉಗ್ರಾಣ ಸಾಮಗ್ರಿಗಳಲ್ಲಿ ವ್ಯತ್ಯಾಸವಾಗಿದ್ದು 12,39,962.60ರೂ.ಗಳ ಸಾಮಗ್ರಿಗಳ ವಿತರಣೆ ಸರಿಯಾಗಿ ನಿರ್ವಹಿಸದೆ ಸರ್ಕಾರಕ್ಕೆ ನಷ್ಟವುಂಟು ಮಾಡಿರುವ ಆರೋಪ ಸಾಬೀತಾಗಿದೆ.

ಸರ್ಕಾರವು ವಿಚಾರಣಾ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಅದನ್ನು ಒಪ್ಪಲು ನಿರ್ಧರಿಸಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಇಬ್ಬರು ಆಪಾದಿತರಿಗೆ ಮೇಲೆ ಓದಲಾದ ಕ್ರಮಸಂಖ್ಯೆ (5)ರ 2ನೇ ಕಾರಣ ಕೇಳುವ ನೋಟಿಸ್‌ನೊಂದಿಗೆ ಜಾರಿಮಾಡಿತ್ತು. ಈ ಪೈಕಿ ಶ್ರೀ ಧರ್ಮಪ್ಪ, ಅಂದಿನ ದ್ವಿತೀಯ ದರ್ಜೆ ಸಹಾಯಕ ಇವರು ಮೇಲೆ ಓದಲಾದ ಕ್ರಮಸಂಖ್ಯೆ (6)ರ ಪತ್ರದಲ್ಲಿ ತಮ್ಮ ಲಿಖಿತ ಹೇಳಿಕೆ ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿ, ತಮ್ಮನ್ನು ಆರೋಪ ಮುಕ್ತಗೊಳಿಸಲು ಕೋರಿದ್ದರು. ಶ್ರೀ ಹೆಚ್. ಬಿ. ಸೋಮಶೇಖರಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರು 2ನೇ ಕಾರಣ ಕೇಳುವ ನೋಟಿಸನ್ನು ಜಾರಿಗೊಳಿಸಿದ್ದರು. ಆದರೆ ಅವರು ತಮ್ಮ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ.

ಶ್ರೀ ಧರ್ಮಪ್ಪ ಇವರು 2ನೇ ಕಾರಣ ಕೇಳುವ ನೋಟಿಸ್‌ಗೆ ನೀಡಿರುವ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ ಅವುಗಳಲ್ಲಿ ಪರಿಶೀಲನೆಗೆ ಒಳಪಡಿಸಬಹುದಾದ ಯಾವುದೇ ಹೊಸ ಅಂಶಗಳಾಗಲೀ: ದಾಖಲೆಗಳಾಗಲೀ ಕಂಡುಬಾರದ್ದರಿಂದ ಹಾಗೂ ಮತ್ತೊಬ್ಬ ಆಪಾದಿತರಾದ ಶ್ರೀ ಹೆಚ್. ಬಿ. ಸೋಮಶೇಖರಪ್ಪ ಇವರು ಸರ್ಕಾರದ 2ನೇ ಕಾರಣ ಕೇಳುವ ನೋಟಿಸ್‌ಗೆ ತಮ್ಮ ಲಿಖಿತ ಹೇಳಿಕೆಗಳನ್ನು

ಸಲ್ಲಿಸದ ಕಾರಣ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿ ಅದರಂತೆ ಆಪಾದಿತರುಗಳಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟವನ್ನು ವಸೂಲು ಮಾಡಲು ಹಾಗೂ ಅವರ ಕರ್ತವ್ಯ ಲೋಪಕ್ಕೆ ಸಂಬಂಧಿಸಿದಂತೆ ಸೂಕ್ತ ದಂಡನೆ ವಿಧಿಸಲು ಸರ್ಕಾರವು ನಿರ್ಣಯಿಸಿದೆ.

ಶ್ರೀ ಹೆಚ್. ಬಿ. ಸೋಮಶೇಖರಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಪ್ರಸ್ತುತ ನಿವೃತ್ತಿ ಹೊಂದಿರುವುದರಿಂದ ವಿಚಾರಣಾ ವರದಿಯಂತೆ ಅವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟವನ್ನು ವಸೂಲು ಮಾಡಲು ಈ ಬಗ್ಗೆ ವಿಧಿ ವಿಧಾನಗಳನ್ನು ಪೂರೈಸಿದ ನಂತರ ಅವರ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲು ಸರ್ಕಾರವು ನಿರ್ಣಯಿಸಿದೆ.

ವಿಚಾರಣಾ ವರದಿಯಂತೆ ಪ್ರಕರಣದಲ್ಲಿ ಒಳಗೊಂಡ ಮತ್ತೊಬ್ಬ ಆಪಾದಿತ ನೌಕರನಾದ ಶ್ರೀ ಕೆ. ಧರ್ಮಪ್ಪ, ಅಂದಿನ ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಸಾಗರ ಇವರ ಮೇಲೆ ರುಜುವಾತಾದ ಆರ್ಥಿಕ ನಷ್ಟದ ಪರಿಮಾಣ ಮತ್ತು ಕರ್ತವ್ಯಲೋಪದ ಗಂಭೀರತೆಯನ್ನು ಮನಗಂಡು ಅವರಿಂದ ಉಂಟಾಗಿರುವ 6,72,441.45 ರೂ.ಗಳ ಆರ್ಥಿಕ ನಷ್ಟವನ್ನು ವಸೂಲು ಮಾಡುವುದರೊಂದಿಗೆ ಅವರು ಎಸಗಿರುವ ಕರ್ತವ್ಯ ಲೋಪಕ್ಕಾಗಿ ಅವರ ವೇತನವನ್ನು ದ್ವಿತೀಯ ದರ್ಜೆ ಸಹಾಯಕನ ವೇತನ ಶ್ರೇಣಿಯ ಕನಿಷ್ಟ ಹಂತಕ್ಕೆ 2 ವರ್ಷಗಳ ಅವಧಿಗೆ ಇಳಿಸುವುದರೊಂದಿಗೆ ಹಾಗೂ ಸದರಿ ದಂಡನೆಯ ಅವಧಿಯಲ್ಲಿ ಅವರು ವಾರ್ಷಿಕ ವೇತನ ಬಡ್ತಿಗಳನ್ನು ಗಳಿಸಲು ಅರ್ಹರಲ್ಲವೆಂದು ದಂಡನೆ ವಿಧಿಸಲು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 9 ಇಎನ್‌ಕ್ಯೂ 98 ಬೆಂಗಳೂರು, ದಿನಾಂಕ: 17ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಸಾಗರ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗದ ಉಗ್ರಾಣ ಸಾಮಗ್ರಿಗಳ ಕೊರತೆಗೆ ಕಾರಣರಾಗಿ ಕರ್ತವ್ಯಲೋಪವೆಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವರೆಂಬ ಆರೋಪಗಳಿಗೆ ಸಂಬಂಧಿಸಿದಂತೆ ಸಾಬೀತಾದ ಆಪಾದನೆಗಳಿಗಾಗಿ ಶ್ರೀ ಕೆ. ಧರ್ಮಪ್ಪ ಅಂದಿನ, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಸಾಗರ (ಪ್ರಸ್ತುತ ದ್ವಿತೀಯ ದರ್ಜೆ ಸಹಾಯಕ, ಲೋಕೋಪಯೋಗಿ ವಿಭಾಗ, ಉಡುಪಿ) ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತ ರೂ. 6,72,441.45 ಪೈಸೆಗಳನ್ನು ಕರ್ನಾಟಕ ನಾಗರೀಕ ಸೇವಾ (ವ.ನಿ.ಮೇ) ನಿಯಮ 1957ರ ನಿಯಮ 8 (IV)ರಂತೆ ಅವರ ವೇತನದಿಂದ ವಸೂಲು ಮಾಡಲು ಹಾಗೂ ಸದರಿ ನಿಯಮದ ನಿಯಮ (IV)(ಎ) ರಂತೆ ಅವರ ವೇತನವನ್ನು ದ್ವಿತೀಯ ದರ್ಜೆ ಸಹಾಯಕ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ 2 ವರ್ಷಗಳ ಅವಧಿಗೆ ಇಳಿಸುವುದರೊಂದಿಗೆ ಸದರಿ ದಂಡನೆ ಅವಧಿಯಲ್ಲಿ ಅವರು ವಾರ್ಷಿಕ ವೇತನ ಬಡ್ತಿಗಳನ್ನು ಗಳಿಸಲು ಅರ್ಹರಲ್ಲವೆಂದು ದಂಡನೆ ವಿಧಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1478

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ ಆರ್. ಗೋಪಾಲ್ ರಾಠೋಡ, ಅಂದಿನ ಕಿರಿಯ ಇಂಜಿನಿಯರ್ (ಎಂ.ಆರ್.ಇ) ತಾಲ್ಲೂಕು ಪಂಚಾಯತ್, ಯಾದಗಿರಿ, ಹಾಲಿ ಕಿರಿಯ ಇಂಜಿನಿಯರ್ (ಎಂಆರ್‌ಇ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಚಿಂಚೋಳಿ, ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಶ್ರೀ ಆರ್. ಗೋಪಾಲ್ ರಾಠೋಡ, ಇವರಿಗೆ ಕಾರಣ ಕೇಳುವ ನೋಟಿಸ್‌ನೊಂದಿಗೆ ಜಾರಿಗೊಳಿಸಿರುವ ಆರೋಪಪಟ್ಟಿ ಸಂಖ್ಯೆ: ಜಿಪಗು: ಆಡಳಿತ; ವಿಚಾರಣೆ 30: 98-99, ದಿ: 16-6-99.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಆದೇಶ ಸಂ: ಜಿಪಗು: ಆಡಳಿತ: ವಿಚಾರಣೆ: 81: 97-98, ದಿ: 7-12-99.
3. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರಸಂಖ್ಯೆ: ಜಿಪಗು: ಆಡಳಿತ: ವಿಚಾರಣೆ: 81: 97-98, ದಿ: 15-4-02.
4. ಸರ್ಕಾರದಿಂದ ಜಾರಿಗೊಳಿಸಿರುವ 2ನೇ ಕಾರಣ ಕೇಳುವ ನೋಟಿಸ್ ಸಂ: ಗ್ರಾಅಪ 42 ಇಎನ್‌ಕ್ಯೂ 98, ದಿ: 9-8-02.
5. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಜಿಪಗು: ಆಡಳಿತ: ವಿಚಾರಣೆ: 81: 97-98, ದಿ: 22-3-03.
6. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ: 89: ಸಿಎನ್‌ಎಸ್: 03, ದಿ: 3-11-03.

**ಪ್ರಸ್ತಾವನೆ:**

ಶ್ರೀ ಆರ್. ಗೋಪಾಲ್ ರಾಠೋಡ, ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಚಿಂಚೋಳಿ ಇವರು ಯಾದಗಿರಿ ತಾಲ್ಲೂಕು ಪಂಚಾಯತ್ ಕಛೇರಿಯಲ್ಲಿ ಕಿರಿಯ ಇಂಜಿನಿಯರ್‌ರಾಗಿ ಎರವಲು ಸೇವೆಯ ಮೇಲೆ ದಿ: 27-6-95ರಿಂದ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳ ಹಳ್ಳಿಗಳಾದ ರಚನಳ್ಳಿ, ಬೆಳಗೇರಾ ಕುರುಕುಂಬಳ ತಾಂಡ, ರಾಮಪುರ, ಮುನಗಲ್, ಬೊಮ್ಮರಾಲದೊಡ್ಡಿ, ಮುಂಡರಗಿ, ಕಾಳಬೆಳಗುಂದಾ, ಕೊಂಡಾಪುರ, ಮುನಗಲ್, ಗುಡಲಗುಂಟಾ, ಸೈದಾಪುರ, ಅನೂರು, ಗೂಡೂರು, ನೀಲಹಳ್ಳಿ ಗುಡಲಗುಂಟಾ, ಅನೂರು ಬಿ, ಪಗ್ಲಾಪುರ, ಬಮರಾಲದೊಡ್ಡಿ, ಮಾದವಾರ, ಬಾಲಚೇಡ, ಸೌರಾಷ್ಟ್ರಹಳ್ಳಿ, ಬಾಡಿಯಾಳ, ಗುಡಲಗುಂಟಾ, ಶೆಟ್ಟಿಹಳ್ಳಿ ಗ್ರಾಮಗಳಲ್ಲಿ ಆಶ್ರಯ, ಅಂಬೇಡ್ಕರ್ ಮತ್ತು ಇಂದಿರಾ

ಆವಾಸ್ ಯೋಜನೆಯಡಿ ಮನೆಗಳ ನಿರ್ಮಾಣಕ್ಕಾಗಿ ಹಾಗೂ ಉದ್ಯೋಗ ಭರವಸೆ ಯೋಜನೆಯಡಿಯಲ್ಲಿ ಅಂಗನವಾಡಿ ಮತ್ತು ಶಾಲಾ ಕಟ್ಟಡ ನಿರ್ಮಾಣಕ್ಕಾಗಿ ಮತ್ತು ಜೆ. ಆರ್. ವೈ. ಯೋಜನೆಯಡಿ ಒಳರಸ್ತೆ ನಿರ್ಮಾಣಕ್ಕಾಗಿ ವಿವಿಧ ಅಭಿವೃದ್ಧಿ ಯೋಜನೆಗಳ ಅಡಿಯಲ್ಲಿ ಕೈಗೊಂಡ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಚೆಕ್ ಮೂಲಕ ದಿನಾಂಕ: 3-8-96, 9-4-96, 25-3-96, 1-6-96, 18-4-96, 21-9-96, 21-9-97, 1-8-97, 11-10-96, 21-10-97, 18-5-96, 27-11-96, 31-3-97, 30-9-96, 30-3-96, 11-1-98, 29-3-97, 1-6-96, 20-3-97, 28-2-97, 29-3-97, 30-3-96ರಂದು ಒಟ್ಟು 13,53,000 ರೂ.ಗಳನ್ನು ಪಡೆದಿದ್ದು ಮುಂಗಡ ಪಡೆದ ಪೂರ್ಣ ಮೊತ್ತದಷ್ಟು ಕಾಮಗಾರಿಗಳನ್ನು ನಿರ್ವಹಿಸಿ ಬಿಲ್ಲುಗಳನ್ನು ಸಲ್ಲಿಸದೆ ಈ ಪೈಕಿ ಕೇವಲ 8,14,266 ರೂ.ಗಳನ್ನು ಮಾತ್ರ ಹೊಂದಾಣಿಕೆ ಮಾಡಿ ಉಳಿದ 5,38,734 ರೂ.ಗಳನ್ನು ಹೊಂದಾಣಿಕೆ ಮಾಡದೆ ಹಣ ದುರುಪಯೋಗಪಡಿಸಿಕೊಂಡಿದ್ದರೆಂಬ ಬಗ್ಗೆ ಹಾಗೂ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾದ ಬಗ್ಗೆ ದಿನಾಂಕ: 17-5-97 ರಿಂದ 3-7-98ರವರೆಗೆ ಸುಮಾರು 11 ನೋಟೀಸ್ ಹಾಗೂ ತಂತಿ ಸಂದೇಶಗಳನ್ನು ನೀಡಿದರೂ ಸದರಿ ನೌಕರರು ಈ ನೋಟಿಸ್‌ಗಳನ್ನು ತಾತ್ಸಾರ ಮಾಡಿ ದಿನಾಂಕ: 1-1-97 ರಿಂದ 20-1-97, 3-2-97 ರಿಂದ 6-2-97ರವರೆಗೆ, 14-2-97 ರಿಂದ 17-2-97, 24-2-92 ರಿಂದ 22-2-97, 10-3-97 ರಿಂದ 11-3-97, 5-4-97 ರಿಂದ 7-4-97, 17-4-97 ರಿಂದ 22-4-97, 5-5-97 ರಿಂದ 12-5-97, 17-5-97 ರಿಂದ 25-7-97, 7-6-97 ರಿಂದ 10-6-97, 16-6-97 ರಿಂದ 23-6-97, 1-7-97 ರಿಂದ 9-7-97, 25-8-97 ರಿಂದ 31-8-97, 1-9-97 ರಿಂದ 3-9-97, 17-9-97 ರಿಂದ 21-9-97ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾದ್ದರಿಂದ ಈ ಬಗ್ಗೆ ಯಾದಗಿರಿ ನಗರ ಪೊಲೀಸ್ ಠಾಣೆಯಲ್ಲಿ ಗುನ್ನೆ ನಂ: 124: 97 ರ ಕೇಸ್ ದಾಖಲು ಮಾಡಲಾಯಿತೆಂದು ಅದಾದ ನಂತರ ನೌಕರರು ದಿ: 6-5-98ರಂದು ಕೆಲಸಕ್ಕೆ ಹಾಜರಾಗಿ ನಂತರ 3-6-98ರಿಂದ 5-6-98, 9-6-98 ರಿಂದ 15-6-98, 18-6-98 ರಿಂದ 28-6-98 ರವರೆಗೆ ಕರ್ತವ್ಯದಿಂದ ಗೈರು ಹಾಜರಾದ್ದರಿಂದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗ ಇವರು ಸದರಿ ನೌಕರರ ವಿರುದ್ಧ ಮೇಲೆ ಹೇಳಲಾದ ಆಪಾದನೆಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರನ್ನು ದಿನಾಂಕ: 29-6-98 ರಿಂದ ಸೇವೆಯಿಂದ ಅಮಾನತ್ತಿನಲ್ಲಿರಿಸಿದ್ದಾಗಿಯೂ ಮತ್ತು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ: 16-6-99ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಸದರಿ ನೌಕರರ ಮೇಲಿನ ಮೇಲೆ ಹೇಳಲಾದ ಆಪಾದನೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರಿ ಸೇವಾ (ವನಿಅ) ನಿಯಮಗಳು 1957ರ ನಿಯಮ 11ರ ರೀತ್ಯಾ ಇಲಾಖಾ ವಿಚಾರಣೆ ಹೂಡಿ ಆರೋಪಪಟ್ಟಿ ಜಾರಿ ಮಾಡಿದ್ದರು. ಆಪಾದಿತ ನೌಕರರು ತಮ್ಮ ಮೇಲಿನ ಆಪಾದನೆಯಲ್ಲಿ ಸಂಬಂಧಿಸಿದಂತೆ ನಿಗದಿತ ಸಮಯದೊಳಗೆ ಯಾವುದೇ ಲಿಖಿತ ಹೇಳಿಕೆ ಸಲ್ಲಿಸದಿದ್ದರಿಂದ ಅವರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಸತ್ಯತೆಯನ್ನು ಅರಿಯಲು ವಿವರವಾದ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮಸಂಖ್ಯೆ (2)ರ ದಿನಾಂಕ: 7-12-99ರ ಆದೇಶದಲ್ಲಿ ಸಹಾಯಕ ಕಮೀಷನರ್, ಯಾದಗಿರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದರು. ಅದರಂತೆ ವಿಚಾರಣಾಧಿಕಾರಿಗಳು ಆಪಾದಿತ ನೌಕರರ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ವಿಚಾರಣೆ ನಡೆಸಿ ದಿ: 31-3-01ರಂದು ಸಲ್ಲಿಸಿದ್ದ ವಿಚಾರಣಾ ವರದಿಯನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಪರಿಶೀಲಿಸಿ ವಿವರವಾದ ವಿಚಾರಣೆಯಲ್ಲಿ ಆಪಾದಿತರ ಮೇಲಿನ ಆಪಾದನೆಗಳು ರುಜುವಾತಾದ್ದರಿಂದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ವಿಚಾರಣಾ ವರದಿಯನ್ನು ಒಪ್ಪಿ ಅದನ್ನು ಮುಂದಿನ ಕ್ರಮ ಜರುಗಿಸುವ ಮುನ್ನ ಆಪಾದಿತ ನೌಕರರಿಗೆ ದಿ: 12: 13-2-02 ರ 2ನೇ ಕಾರಣ ಕೇಳುವ ನೋಟಿಸ್‌ನೊಂದಿಗೆ ವಿಚಾರಣಾ ವರದಿಯನ್ನು ಜಾರಿ ಮಾಡಿದ್ದರು. ಆಪಾದಿತ ನೌಕರರು 2ನೇ ಕಾರಣ ಕೇಳುವ ನೋಟಿಸ್‌ಗೆ ಉತ್ತರಿಸದಿದ್ದರಿಂದ ಹಾಗೂ ಇವರ ಮೇಲೆ ರುಜುವಾತಾದ ಆಪಾದನೆಗಳ ತೀವ್ರತೆಯನ್ನು ಗಮನಿಸಿ ಆಪಾದಿತರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ 1957ರ ನಿಯಮಾವಳಿಗಳ V ರಿಂದ VIII ರಲ್ಲಿನ ಕಠಿಣ ದಂಡನೆಯನ್ನು ವಿಧಿಸಬೇಕಾಗಿರುವುದರಿಂದ ಅಂತಹ ದಂಡನೆ ವಿಧಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಅಧಿಕಾರವಿಲ್ಲದ್ದರಿಂದ ಪ್ರಕರಣದಲ್ಲಿ ಮುಂದಿನ ಕ್ರಮ ಕೈಗೊಳ್ಳುವಂತೆ ಕೋರಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿರವರು ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದೊಂದಿಗೆ ಸರ್ಕಾರಕ್ಕೆ ಕಳುಹಿಸಿಕೊಟ್ಟಿರುತ್ತಾರೆ.

ಸರ್ಕಾರವು ಈ ಪ್ರಕರಣದಲ್ಲಿ ಆಪಾದಿತ ನೌಕರನ ಮೇಲೆ ಮಾಡಲಾಗಿದ್ದ ಆಪಾದನೆಗಳು, ಆ ಬಗ್ಗೆ ನಡೆಸಲಾದ ವಿಚಾರಣೆ ಹಾಗೂ ಆ ಬಗೆಗಿನ ವಿಚಾರಣಾ ವರದಿ ಮತ್ತು ಲಭ್ಯ ದಾಖಲೆಗಳನ್ನು ಅವಗಾಹಿಸಿ ವಿವರವಾದ ವಿಚಾರಣೆಯಲ್ಲಿ ಆಪಾದಿತ ನೌಕರನು ಆಪಾದಿಸಲಾದಂತೆ ವಿವಿಧ ಕಾಮಗಾರಿಗಳಿಗೆ ಚೆಕ್ ಮೂಲಕ 13,53,000 ರೂ. ಗಳನ್ನು ಮುಂಗಡವಾಗಿ ಪಡೆದುಕೊಂಡು ಸದರಿ ಹಣವನ್ನು ಪೂರ್ತಿಯಾಗಿ ಕಾಮಗಾರಿಗಳಿಗೆ ಖರ್ಚು ಮಾಡಿದ ಬಗ್ಗೆ ಲೆಕ್ಕದ ತನಿಖೆ ಹಾಗೂ ಕಾಮಗಾರಿಗಳ ಪ್ರಗತಿಯನ್ನು ಮತ್ತು ಬಾಕಿ ಉಳಿದ ಹಣದ ಲೆಕ್ಕದ ವಿವರ ಸಲ್ಲಿಸುವಲ್ಲಿ ವಿಫಲನಾಗಿರುವುದು ಈ ಬಗ್ಗೆ ಅವರಿಗೆ ನೋಟಿಸ್ ಜಾರಿ ಮಾಡಿದರೂ ಉತ್ತರಿಸದೇ ಇರುವುದು, ಈ ಬಾಬ್ತು 5,38,734 ರೂ.ಗಳ ಲೆಕ್ಕ ತನಿಖೆಯನ್ನು ಕಚೇರಿ ಮುಖ್ಯಸ್ಥರಿಗೆ ನಿಗದಿತ ಸಮಯದಲ್ಲಿ ಸಲ್ಲಿಸದೆ ಇರುವುದು ದಾಖಲೆಗಳಿಂದ ಕಂಡು ಬರುತ್ತದೆಂದೂ, ಆಪಾದಿತರು ಈ ಬಗ್ಗೆ ತಮ್ಮ ಅನಾರೋಗ್ಯ, ಸಂಬಂಧಪಟ್ಟ ಅಧಿಕಾರಿಗಳ ವರ್ಗಾವಣೆ ಕಾರಣಗಳನ್ನು ನೀಡಿದ್ದು ಆಪಾದಿಸಲಾದಂತೆ ಆಪಾದನೆ ಭಾಗಶಃ ರುಜುವಾತಾಗಿರುವುದಾಗಿ ನೀಡಿರುವ ವರದಿ ಹಾಗೂ ಇವರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪ ಸಹಾ ಸ್ಥಿರಪಟ್ಟಿರುವುದಾಗಿ ವಿಚಾರಣಾಧಿಕಾರಿಗಳೂ ನೀಡಿರುವ ವರದಿ ಹಾಗೂ ಇವರು ಪಡೆದಿದ್ದ 13,53,000 ರೂ. ಗಳ ಮುಂಗಡದ ಬಾಬ್ತು 11,05,532 ರೂ.ಗಳ ಮೊತ್ತದ ಕಾಮಗಾರಿಗಳನ್ನು ಪೂರೈಸಿದ್ದು ಉಳಿದಂತೆ 2,47,463 ರೂ.ಗಳ ಮುಂಗಡ ಹಣಕ್ಕೆ ಆಪಾದಿತ ನೌಕರನು ಲೆಕ್ಕದ ವಿವರ ಕೊಡದಿರುವ ಬಗ್ಗೆ ಮತ್ತೆ ಹೆಚ್ಚಿನ ಮುಂಗಡ ಪಡೆದಿರುವ ಬಗ್ಗೆ ಸಮರ್ಪಕ ಉತ್ತರ ನೀಡಲು ಆಪಾದಿತ ನೌಕರನು ವಿಫಲರಾಗಿರುವುದರಿಂದ ಈ ಆಪಾದನೆ ಸಹ ಸಾಬೀತಾಗುತ್ತದೆಂಬ ವಿಚಾರಣಾಧಿಕಾರಿಗಳ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ವಿಚಾರಣಾ ವರದಿಯನ್ನು ಒಪ್ಪಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿ: 9-8-02 ರ 2ನೇ ಕಾರಣ ಕೇಳುವ ನೋಟಿಸ್‌ನೊಂದಿಗೆ ವಿಚಾರಣಾ ವರದಿಯನ್ನು ಆಪಾದಿತ ನೌಕರನಿಗೆ ಜಾರಿ ಮಾಡಿತ್ತು ಆಪಾದಿತ ನೌಕರನು ಈ

ನೋಟೀಸ್‌ನ್ನು ದಿನಾಂಕ: 10-3-03ರಂದು ಸ್ವೀಕರಿಸಿಯೂ ಸಹಾ ಈ ಬಗ್ಗೆ ಯಾವುದೇ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲವಾದ್ದರಿಂದ ಆಪಾದಿತರು ತಮ್ಮ ಹೇಳಿಕೆಗಳನ್ನು ಒಪ್ಪಿಕೊಂಡಂತಾಗಿದೆ.

ಹಾಗಾಗಿ ಸರ್ಕಾರವು ಆಪಾದಿತನ ಮೇಲಿನ ಆಪಾದನೆಗಳು ಆಪಾದಿಸಲಾದಂತೆ ರುಜುವಾತಾಗುತ್ತವೆಂದು ನಿರ್ಣಯಿಸಿದೆ ಹಾಗೂ ಎಂ.ಆರ್.ಇ. ಮೇಲಿರುವ ನೌಕರರಾದ ಇವರಿಗೆ ಇಷ್ಟೊಂದು ಭಾರಿ ಮೊತ್ತವನ್ನು ಮುಂಗಡವಾಗಿ ನೀಡಿದ ಸಂಬಂಧಪಟ್ಟ ಕಾರ್ಯನಿರ್ವಾಹಕ ಅಧಿಕಾರಿಗಳು ಮುಂಗಡದ ಬಾಬ್ತು ಬಾಕಿ ಉಳಿದಿರುವ 2,47,463 ರೂ.ಗಳಿಗೆ ಜವಾಬ್ದಾರರಾಗಿರುತ್ತಾರೆಂದೂ, ಅದನ್ನು ಅವರಿಂದ ವಸೂಲು ಮಾಡಲು ಪ್ರತ್ಯೇಕ ಕ್ರಮ ಜರುಗಿಸಲು ಸರ್ಕಾರವು ನಿರ್ಧರಿಸಿ ಆ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಲೋಕಸೇವಾ ಆಯೋಗವು ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಆದ ಕಾರಣ ಆಪಾದಿತರ ಮೇಲೆ ಸಾಬೀತಾದ ಆರೋಪಗಳ ತೀವ್ರತೆಯನ್ನು ಸರ್ಕಾರವು ಮನಗಂಡು ಆ ತೀವ್ರತೆಗೆ ಅನುಗುಣವಾಗಿ ಅವರಿಗೆ ಸೂಕ್ತ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 42 ಇಎನ್‌ಕ್ಯೂ 98 ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಆರ್. ಗೋಪಾಲ್ ರಾಠೋಡ, ಅಂದಿನ ಕಿರಿಯ ಇಂಜಿನಿಯರ್ (ಎಂ.ಆರ್.ಇ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಯಾದಗಿರಿ (ಹಾಲಿ ಕಿರಿಯ ಇಂಜಿನಿಯರ್ (ಎಂ.ಆರ್.ಇ) ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ ಚಿಂಚೋಳಿ) ಇವರು ತಾಲ್ಲೂಕು ಪಂಚಾಯತ್, ಯಾದಗಿರಿ, ಗುಲ್ಬರ್ಗ ಜಿಲ್ಲೆ ಇಲ್ಲಿ ಎರವಲು ಸೇವೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿದ ಹಣ ದುರುಪಯೋಗ ಮತ್ತು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯ ಸಾಬೀತಾದ ಆರೋಪಗಳ ತೀವ್ರತೆಗನುಗುಣವಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (viii)ರಂತೆ ಶ್ರೀ ಆರ್. ಗೋಪಾಲ್ ರಾಠೋಡ್, ಕಿರಿಯ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಚಿಂಚೋಳಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1480

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸ್ನಾತಕೋತ್ತರ ವೈದ್ಯಕೀಯ ಪದವಿ ಮತ್ತು ಡಿಪ್ಲೊಮಾ ಕೋರ್ಸುಗಳ ಹಾಗೂ ದಂತ ಪದವಿ ಕೋರ್ಸುಗಳ ಪ್ರವೇಶಾವಕಾಶಕ್ಕೆ ಅಭ್ಯರ್ಥಿಗಳ ಆಯ್ಕೆಗಾಗಿ casual vacancy round ನಡೆಸುವಿಕೆ.

**ಓದಲಾಗಿದೆ:** ತಾ: 3-11-2003ರ ಸಂಖ್ಯೆ: ಪಿಜಿಎಸ್: 208: 2003-04 ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

1. 2003 ರ ಕರ್ನಾಟಕ ಸ್ನಾತಕೋತರ ವೈದ್ಯಕೀಯ ಮತ್ತು ದಂತ ಪದವಿ ಮತ್ತು ಡಿಪ್ಲೊಮೋ ಕೋರ್ಸುಗಳ ಪ್ರವೇಶಾವಕಾಶಕ್ಕಾಗಿ ಪ್ರವೇಶ ಪರೀಕ್ಷೆ ನಡೆಸುವಂತೆ ನಿಯಮಾವಳಿಯ ಅನುಸಾರ ಸರ್ಕಾರಿ ವೈದ್ಯಕೀಯ: ದಂತ ಕಾಲೇಜುಗಳಲ್ಲಿನ ಹಾಗೂ ಖಾಸಗಿ ವೈದ್ಯಕೀಯ: ದಂತ ಕಾಲೇಜುಗಳಲ್ಲಿ ಸರ್ಕಾರಿ ಸೀಟುಗಳ ಕೋಟಾದಲ್ಲಿ ಸ್ನಾತಕೋತ್ತರ ವೈದ್ಯಕೀಯ ಪದವಿ ಮತ್ತು ಡಿಪ್ಲೊಮೋ ಹಾಗೂ ಸ್ನಾತಕೋತ್ತರ ದಂತ ಪದವಿ ಕೋರ್ಸುಗಳ ಪ್ರವೇಶಕ್ಕೆ ಕೌನ್ಸಿಲಿಂಗ್ ಮೂಲಕ PGET- 2003 ರ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ತಾ: 28-10-2003ರಿಂದ 31-10-2003ರವರೆಗೆ ಕೌನ್ಸಿಲಿಂಗ್‌ನ್ನು ನಡೆಸಲಾಯಿತು. ಕೌನ್ಸಿಲಿಂಗ್ ನಂತರ ವಿವಿಧ ಪ್ರವರ್ಗಗಳ ಅಡಿ 54 ಸ್ನಾತಕೋತ್ತರ ವೈದ್ಯಕೀಯ ಪದವಿ ಸೀಟುಗಳು ಮತ್ತು 84 ಡಿಪ್ಲೊಮೋ ಸೀಟುಗಳು ಹಂಚಿಕೆಯಾಗದೆ ಸರ್ಕಾರಿ ಕೋಟಾದಲ್ಲಿ ಖಾಲಿ ಉಳಿದಿವೆ. ಮೀಸಲಿಟ್ಟಿರುವ ಸೀಟುಗಳನ್ನು ಸಾಮಾನ್ಯ ಅಭ್ಯರ್ಥಿ ಸೀಟುಗಳಿಗೆ ಪರಿವರ್ತಿಸಿ 2003-04ನೇ ಶೈಕ್ಷಣಿಕ ವರ್ಷದಲ್ಲಿ casual vacancy Round ಕೌನ್ಸಿಲಿಂಗ್‌ನ್ನು ನಡೆಸಲು ಅನುಮತಿಸಬೇಕೆಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದಾರೆ.

2. 2003 ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಮತ್ತು ಡಿಪ್ಲೊಮೋ ಕೋರ್ಸುಗಳ ಪ್ರವೇಶಾವಕಾಶಕ್ಕೆ ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ ಉಪಬಂಧಗಳ ರೀತ್ಯಾ PGET- 2003ರ ಅಭ್ಯರ್ಥಿಗಳಿಗೆ ತಾ: 28-10-2003ರಿಂದ ತಾ: 31-10-2003ರವರೆಗೆ ನಡೆಸಿದ ಕೌನ್ಸಿಲಿಂಗ್‌ನಲ್ಲಿ ಅನೇಕ ಸ್ನಾತಕೋತ್ತರ ವೈದ್ಯಕೀಯ ಪದವಿ ಮತ್ತು ಡಿಪ್ಲೊಮೋ ಕೋರ್ಸುಗಳ ಪ್ರವೇಶಕ್ಕೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಮೀಸಲಿಟ್ಟಿದ್ದ ಸೀಟುಗಳು ಖಾಲಿ ಇರುವುದರಿಂದ ಅವುಗಳನ್ನು ಸಾಮಾನ್ಯ ಸೀಟುಗಳೆಂದು ಪರಿವರ್ತಿಸಿ ಒಂದು casual vacancy round ನಲ್ಲಿ ವಿದ್ಯಾರ್ಥಿಗಳಿಗೆ ಹಂಚಿಕೆ ಮಾಡುವುದು ಸೂಕ್ತವೆಂದು ಸರ್ಕಾರ ಪರಿಗಣಿಸಿದೆ. ಅಲ್ಲದೆ, ಸ್ನಾತಕೋತ್ತರ ದಂತ ಪದವಿ ಕೋರ್ಸುಗಳ ಸೀಟು ವಿತರಣೆ ಅನುಪಾತದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪನ್ನು ಆಧರಿಸಿ ಕೌನ್ಸಿಲಿಂಗ್ ಮೂಲಕ ಸ್ನಾತಕೋತ್ತರ ದಂತ ಪದವಿ ಕೋರ್ಸಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 10 ಎಂಪಿಎಸ್ 2003, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2003**

3. 2003-04ನೆ ಶೈಕ್ಷಣಿಕ ವರ್ಷದಲ್ಲಿ ವೈದ್ಯಕೀಯ ಕಾಲೇಜುಗಳಲ್ಲಿ ಮತ್ತು ದಂತ ಕಾಲೇಜುಗಳಲ್ಲಿ ಸ್ನಾತಕೋತ್ತರ ವೈದ್ಯಕೀಯ ಪದವಿ ಮತ್ತು ಡಿಪ್ಲೊಮೋ ಕೋರ್ಸುಗಳಲ್ಲಿ ಖಾಲಿ ಉಳಿದಿರುವ ಸೀಟುಗಳಿಗೆ ಹಾಗೂ ಸ್ನಾತಕೋತ್ತರ ದಂತ ಪದವಿ ಕೋರ್ಸುಗಳ ಸೀಟುಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಪ್ರವೇಶಾವಕಾಶ ಕಲ್ಪಿಸಲು casual vacancy roundನ್ನು ನಡೆಸಲು ಈ ಮೂಲಕ ಆದೇಶಿಸಲಾಗಿದೆ.

4. 2003ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಮತ್ತು ಡಿಪ್ಲೊಮೋ ಕೋರ್ಸುಗಳ ಪ್ರವೇಶಾವಕಾಶಕ್ಕೆ ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ ಉಪಬಂಧಗಳ ಅನುಸಾರ ಸದರಿ casual vacancy round ನ್ನು ಕೌನ್ಸಿಲಿಂಗ್ ಮೂಲಕ ಒಂದು ವಾರದ ಕಾಲಾವಧಿಯಲ್ಲಿ ನಡೆಸತಕ್ಕದ್ದು.

5. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಮೀಸಲಿಟ್ಟಿದ್ದು ಮತ್ತು ಅಭ್ಯರ್ಥಿಗಳ ಕೊರತೆಯಿಂದಾಗಿ ಭರ್ತಿಯಾಗದೆ ಖಾಲಿ ಉಳಿದಿರುವ ಅಂತಹ ಸೀಟುಗಳನ್ನು ಸಾಮಾನ್ಯ ಪ್ರವರ್ಗದ ಸೀಟುಗಳೆಂದು ಅಭ್ಯರ್ಥಿಗಳ ಹಂಚಿಕೆಗೆ ಪರಿವರ್ತಿಸಲು ಅನುಮತಿಸಲಾಗಿದೆ.

6. casual vacancy round ನಲ್ಲಿ ಆಯ್ಕೆಗೊಂಡು ವೈದ್ಯಕೀಯ ಕಾಲೇಜುಗಳಿಗೆ ಮತ್ತು ದಂತ ಕಾಲೇಜುಗಳಿಗೆ ಪ್ರವೇಶಕ್ಕಾಗಿ ವಿತರಿಸಲ್ಪಡುವ ಅಭ್ಯರ್ಥಿಗಳ ಪ್ರವೇಶದ ಕಡೇ ದಿನಾಂಕವನ್ನು ತಾ: 30.11.2003ರವರೆಗೆ ವಿಸ್ತರಿಸಲಾಗಿದೆ ಮತ್ತು ಅದರಂತೆ ಅಧಿಸೂಚನೆ ಹೊರಡಿಸಲು ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವ ವಿದ್ಯಾಲಯವನ್ನು ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1481

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**ವಿಷಯ:** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿರುವ ವೈದ್ಯರು ದರ್ಜೆ-2 ವೃಂದದ ಹುದ್ದೆಗಳನ್ನು ವೈದ್ಯರು ದರ್ಜೆ-1 ವೃಂದಕ್ಕೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರ ಪತ್ರ ಸಂಖ್ಯೆ: ಭಾವೈಪ: 77: ಸಿಬ್ಬಂದಿ (1): 99-2000, ದಿನಾಂಕ: 2-8-1999, 25-1-2000 ಮತ್ತು 17-6-2003.

**ಪ್ರಸ್ತಾವನೆ:**

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವೈದ್ಯರು ದರ್ಜೆ-2 ವೃಂದದ ಶೇಕಡ 10 ರಷ್ಟು ಹುದ್ದೆಗಳನ್ನು ಅಂದರೆ 78 ಹುದ್ದೆಗಳನ್ನು ವೈದ್ಯರು ದರ್ಜೆ-1 ವೃಂದಕ್ಕೆ ಮೇಲ್ದರ್ಜೆಗೇರಿಸಲು ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯ ದಿನಾಂಕ: 2-8-99ರ ಅನುಸಾರ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವೈದ್ಯರು ದರ್ಜೆ-2 ವೃಂದದ 782 ಹುದ್ದೆಗಳು ವೈದ್ಯರು ದರ್ಜೆ-1 ವೃಂದದ 14 ಹುದ್ದೆಗಳು ಅಸ್ತಿತ್ವದಲ್ಲಿದ್ದು, ಪೋಷಕ ವೃಂದಕ್ಕಿಂತ ಬಡ್ತಿ ವೃಂದದ ಹುದ್ದೆಗಳ ಪ್ರಮಾಣ ಶೇಕಡ 10ಕ್ಕಿಂತ ಕಡಿಮೆ ಇರುವುದರಿಂದ ವೈದ್ಯರು ದರ್ಜೆ -2 ವೃಂದದ ವೈದ್ಯರುಗಳಿಗೆ ಬಡ್ತಿ ಅವಕಾಶಗಳು ತೀರ ವಿರಳವಾಗಿರುವುದನ್ನು ಸರ್ಕಾರ ಗಮನಿಸಿದೆ. ವೈದ್ಯರು ದರ್ಜೆ-2 ವೃಂದದ ವೈದ್ಯರುಗಳಿಗೆ ಹೆಚ್ಚಿನ ಬಡ್ತಿ ಅವಕಾಶ ಕಲ್ಪಿಸುವ ದೃಷ್ಟಿಯಿಂದ ಹಾಗೂ ಸಮರ್ಪಕವಾದ ವೃಂದ ಬಲ ನಿರ್ವಹಣೆಗಾಗಿ ಚಾಲ್ತಿಯಲ್ಲಿರುವ 782 ದರ್ಜೆ -2 ಹುದ್ದೆಗಳ ಪೈಕಿ 78 ಹುದ್ದೆಗಳನ್ನು ದರ್ಜೆ-1 ವೃಂದಕ್ಕೆ ಮೇಲ್ದರ್ಜೆಗೇರಿಸಲು ಸರ್ಕಾರ ತೀರ್ಮಾನಿಸಿದೆ.

ಈ ರೀತಿ ಮೇಲ್ದರ್ಜೆಗೇರಿಸಿದ ಹುದ್ದೆಗಳನ್ನು ಹೆಚ್ಚುವರಿ ಹುದ್ದೆಗಳೆಂದು ಪರಿಗಣಿಸತಕ್ಕದ್ದಲ್ಲ. ಚಾಲ್ತಿಯಲ್ಲಿರುವ ಹುದ್ದೆಗಳಲ್ಲಿ ಸರಿಯಾಗಿಸತಕ್ಕದ್ದು. ಆದ್ದರಿಂದ ವೈದ್ಯರು ದರ್ಜೆ-2 ವೃಂದದ ಹುದ್ದೆಗಳನ್ನು 704 ಎಂದು ವೈದ್ಯರು ದರ್ಜೆ-1 ವೃಂದದ ಹುದ್ದೆಗಳನ್ನು 92 ಎಂದು ವೃಂದ ಬಲ ಪರಿಷ್ಕರಿಸಿ ಪುನರ್ ನಿಗದಿಪಡಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 449 ಪಿಐಎಂ 99, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿರುವ 782 ವೈದ್ಯರು ದರ್ಜೆ-2 ವೃಂದದ ಹುದ್ದೆಗಳ ಪೈಕಿ 78 ಹುದ್ದೆಗಳನ್ನು (ಅನುಬಂಧದಲ್ಲಿ ತೋರಿಸಿರುವಂತೆ) ಈ ಕೂಡಲೇ ಜಾರಿಗೆ ಬರುವಂತೆ ವೈದ್ಯರು ದರ್ಜೆ-1 ವೃಂದಕ್ಕೆ ಮೇಲ್ದರ್ಜೆಗೇರಿಸಿ ಆದೇಶಿಸಿದೆ.

ಮೇಲ್ದರ್ಜೆಗೇರಿಸಿದ ಹುದ್ದೆಗಳನ್ನು ಹೆಚ್ಚುವರಿ ಹುದ್ದೆಗಳೆಂದು ಪರಿಗಣಿಸತಕ್ಕದ್ದಲ್ಲ. ಹಾಲಿ ಇರುವ ಹುದ್ದೆಗಳಲ್ಲಿ ಸರಿದೂಗಿಸತಕ್ಕದ್ದು. ಆದ್ದರಿಂದ, ವೈದ್ಯರು ದರ್ಜೆ-2 ವೃಂದದ ಹುದ್ದೆಗಳನ್ನು 704 ಕ್ಕೆ ವೈದ್ಯರು ದರ್ಜೆ-1 ವೃಂದದ ಹುದ್ದೆಗಳನ್ನು 92 ಕ್ಕೆ ವೃಂದ ಬಲ ಪರಿಷ್ಕರಿಸಿ ಈ ಕೆಳಕಂಡಂತೆ ಪುನರ್ ನಿಗದಿಪಡಿಸಲಾಗಿದೆ.

**ವೈದ್ಯರು ದರ್ಜೆ- 1**

| | |
|---|---|
| ವೈದ್ಯರು ದರ್ಜೆ -1 (ಆಯುರ್ವೇದ) | 68 |
| ವೈದ್ಯರು ದರ್ಜೆ -1 (ಯುನಾನಿ) | 11 |
| ವೈದ್ಯರು ದರ್ಜೆ -1 (ಹೋಮಿಯೋಪತಿ) | 08 |
| ವೈದ್ಯರು ದರ್ಜೆ -1 (ನ್ಯಾಚುರೋಪತಿ) | 03 |
| ವೈದ್ಯರು ದರ್ಜೆ -1 (ಯೋಗ) | 02 |
| | **ಒಟ್ಟು 92** |

**ವೈದ್ಯರು ದರ್ಜೆ- 2**

| | |
|---|---|
| ವೈದ್ಯರು ದರ್ಜೆ -2 (ಆಯುರ್ವೇದ) | 609 |
| ವೈದ್ಯರು ದರ್ಜೆ -2 (ಯುನಾನಿ) | 65 |
| ವೈದ್ಯರು ದರ್ಜೆ -2 (ಹೋಮಿಯೋಪತಿ) | 21 |
| ವೈದ್ಯರು ದರ್ಜೆ -2 (ನ್ಯಾಚುರೋಪತಿ) | 02 |
| ವೈದ್ಯರು ದರ್ಜೆ -2 (ಯೋಗ) | 02 |
| | **ಒಟ್ಟು 704** |

ಈ ಆದೇಶದ ಮೂಲಕ ಮೇಲ್ದರ್ಜೆಗೇರಿಸಿದ ಹುದ್ದೆಯನ್ನು ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳ ಅಡಿಯಲ್ಲಿ ಬಡ್ತಿ ಮೂಲಕ ಭರ್ತಿ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/ 750/ ವೆಚ್ಚ -5/2000, ದಿನಾಂಕ: 22-6-2000 ಮತ್ತು 2-7-2000 ಮತ್ತು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಯೋಇ/ 44/ ಜಶ/ 2000, ದಿನಾಂಕ: 23-11-2000 ಮೂಲಕ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮನಾಯಕ್ ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅನುಬಂಧ**

| ಕ್ರ. ಸಂ | ಸಂಸ್ಥೆಗಳ ಹೆಸರು | ವೈದ್ಯರು -ದರ್ಜೆ 2 ಹುದ್ದೆಗಳನ್ನು ವೈದ್ಯರು- ದರ್ಜೆ 1ರ ಹುದ್ದೆಗಳಾಗಿ ಮೇಲ್ದರ್ಜೆಗೇರಿಸುವುದು | | | | |
|---|---|---|---|---|---|---|
| | | ಆಯುರ್ವೇದ | ಹೋಮಿಯೋಪತಿ | ಯುನಾನಿ | ಪ್ರಕೃತಿ ಚಿಕಿತ್ಸೆ | ಯೋಗ |
| 1. | ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು | 13 | - | 05 | 01 | - |
| 2. | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆ, ಮೈಸೂರು | 10 | 01 | 03 | - | 01 |
| 3. | ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ, ಬೆಂಗಳೂರು | - | 03 | - | - | - |
| 4. | ಸರ್ಕಾರಿ ಆಯುರ್ವೇದ ಆಸ್ಪತ್ರೆ, ತುಮಕೂರು | 01 | - | - | - | - |
| 5. | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಮಂಡ್ಯ | 02 | - | - | - | - |
| 6. | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಶಿವಮೊಗ್ಗ | 03 | 01 | - | - | - |
| 7. | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಚಾಮರಾಜನಗರ | 02 | - | - | - | - |
| 8. | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಹಾಸನ | 03 | 01 | - | - | - |
| 9. | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಮಡಿಕೇರಿ | 02 | - | - | - | - |
| 10 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಹುಬ್ಬಳ್ಳಿ | 02 | 01 | - | - | - |
| 11 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಗದಗ | 02 | - | - | - | - |
| 12 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಬಾಗಲಕೋಟೆ | 02 | - | - | - | - |
| 13 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಕಾರವಾರ | 03 | - | - | - | - |
| 14 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಕೊಪ್ಪಳ | 01 | - | - | - | - |
| 15 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ರಾಯಚೂರು | 01 | - | 01 | - | - |
| 16 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಬಳ್ಳಾರಿ | 05 | - | - | - | - |
| 17 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಬೀದರ್ | 01 | - | 01 | - | - |
| 18 | ಸರ್ಕಾರಿ ಆಯುರ್ವೇದ ಆಸ್ಪತ್ರೆ, ಬಿಜಾಪುರ | 05 | 01 | - | - | - |
| 19 | ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಆಸ್ಪತ್ರೆ, ಮೈಸೂರು | - | - | - | 01 | - |
| | **ಒಟ್ಟು** | **58** | **07** | **10** | **02** | **01** |

**ಚೋಮನಾಯಕ್ ಜಿ.**

ಪಿ.ಆರ್. 1482

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 31 ಎಫ್‌ಪಿಆರ್ 2001, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2003**

**ವಿಷಯ:** ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳಲ್ಲಿ ತರಬೇತಿಗೆ ಆಯ್ಕೆಗೆ ಪರಿಷ್ಕೃತ ನಿಯಮಗಳನ್ನು ಪ್ರಕಟಿಸುವ ಬಗ್ಗೆ.

ಕರ್ನಾಟಕ ರಾಜ್ಯ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳಲ್ಲಿ ಅಭ್ಯರ್ಥಿಗಳ ತರಬೇತಿಗೆ ಸಂಬಂಧಿಸಿದಂತೆ, ಕರಡು ಪರಿಷ್ಕೃತ ಆಯ್ಕೆ ನಿಯಮಗಳನ್ನು ಸಾರ್ವಜನಿಕರ ಗಮನಕ್ಕೆ ಪ್ರಕಟಿಸಲಾಗಿದೆ.

ಸದರಿ ಕರಡು ಆಯ್ಕೆ ನಿಯಮಾವಳಿಗಳಿಗೆ ಸಲಹೆ/ ಸೂಚನೆ/ ಆಕ್ಷೇಪಣೆಗಳನ್ನು ಬಾದಿತರಾಗುವವರಿಂದ ಆಹ್ವಾನಿಸಲಾಗಿದ್ದು, ಈ ನಿಯಮಗಳು ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳ ಒಳಗಾಗಿ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕರ್ನಾಟಕ ರಾಜ್ಯ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳಲ್ಲಿ ಅಭ್ಯರ್ಥಿಗಳ ತರಬೇತಿಗೆ ಸಂಬಂಧಿಸಿದ ಆಯ್ಕೆ ನಿಯಮಗಳು

1. **ಶೀರ್ಷಿಕೆ, ಪ್ರಾರಂಭ ಮತ್ತು ಅನ್ವಯ:-**

ಅ) ಈ ನಿಯಮಗಳನ್ನು ಕರ್ನಾಟಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ (ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ) ನಿಯಮಗಳು, 2003 ಎಂದು ಕರೆಯುವುದು.

ಆ) ಈ ನಿಯಮಗಳು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರುತ್ತವೆ.

ಇ) ಈ ನಿಯಮಗಳು, ಕರ್ನಾಟಕ ರಾಜ್ಯ ಸರ್ಕಾರವು ನಡೆಸುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳಲ್ಲಿ ಅಭ್ಯರ್ಥಿಗಳ ಆಯ್ಕೆ, ಪ್ರವೇಶ, ತರಬೇತಿ ಮತ್ತು ಪರೀಕ್ಷೆಗಳನ್ನು ನಿಯಂತ್ರಿಸುತ್ತವೆ.

2. **ವ್ಯಾಖ್ಯಾನಗಳು:-**

ಈ ನಿಯಮಗಳಡಿಯಲ್ಲಿ ಇತರ ಸಂದರ್ಭಗಳನ್ನು ಹೊರತುಪಡಿಸಿ:-

ಅ) "ನಿರ್ದೇಶಕರು" ಎಂದರೆ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಆ) "ಯೋಜನಾ ನಿರ್ದೇಶಕರು" ಎಂದರೆ ಯೋಜನಾ ನಿರ್ದೇಶಕರು (ಸಂತಾನೋತ್ಪತ್ತಿ ಹಾಗೂ ಮಕ್ಕಳ ಆರೋಗ್ಯ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಇ) "ಕರಾರುಪತ್ರ" ಎಂದರೆ ಈ ನಿಯಮಗಳಿಗೆ ಅನುಬಂಧಿಸಲಾಗಿರುವ ಪ್ರಪತ್ರ.

ಈ) "ತರಬೇತಿ ಕೇಂದ್ರ" ಎಂದರೆ ರಾಜ್ಯ ಸರ್ಕಾರವು ನಡೆಸುವ ಜಿಲ್ಲಾ ಆಸ್ಪತ್ರೆ ಮತ್ತು ಇತರ ಆಸ್ಪತ್ರೆಗಳಿಗೆ ಹೊಂದಿಕೊಂಡಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರ.

ಉ) "ಅನುಮೋದನೆ ಸಮಿತಿ" ಎಂದರೆ ನಿಯಮ 9 (ಅ) ದಲ್ಲಿ ವಿವರಿಸಿರುವಂತೆ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಅನುಮೋದಿಸಲು ರಚಿತವಾದ ರಾಜ್ಯ ಮಟ್ಟದ ಸಮಿತಿ.

ಊ) "ಆಯ್ಕೆ ಸಮಿತಿ" ಎಂದರೆ ನಿಯಮ 9 (ಆ)ರಲ್ಲಿ ವಿವರಿಸಿರುವಂತೆ ಅಭ್ಯರ್ಥಿಗಳ ಆಯ್ಕೆ ನಡೆಸಲು ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿ.

ಋ) 'ಪರೀಕ್ಷಾ ಮಂಡಳಿ" ಎಂದರೆ ಕೇಂದ್ರೀಕೃತ ಪರೀಕ್ಷೆಗಳು ಹಾಗೂ ಮೌಲ್ಯಮಾಪನಗಳನ್ನು ನಡೆಸಲು ಹಾಗೂ ಆ ಸಂಬಂಧ ವಿಧಿ ವಿಧಾನಗಳನ್ನು ರೂಪಿಸಲು ಸರ್ಕಾರವು ರಚಿಸುವ ಮಂಡಳಿ.

3. **ತರಬೇತಿ ಆಯ್ಕೆಗೆ ಅರ್ಜಿಗಳನ್ನು ಆಹ್ವಾನಿಸುವ ಪ್ರಕ್ರಿಯೆ:-**

ಅ) ಸರ್ಕಾರವು ಕಾಲಕಾಲಕ್ಕೆ ನಿಗದಿಪಡಿಸುವ ಸಂಖ್ಯೆಯ ಅಭ್ಯರ್ಥಿಗಳನ್ನು ತರಬೇತಿಗೆ ಆಯ್ಕೆ ಮಾಡುವುದಕ್ಕೆ ಸಂಬಂಧಿಸಿದಂತೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಪ್ರಕ್ರಿಯೆಯನ್ನು ಅನುಮೋದನೆ ಸಮಿತಿಯಲ್ಲಿ ಕೈಗೊಳ್ಳುವುದು.

ಆ) ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳನ್ನು / ನಿಯಮಗಳನ್ನು ಗಮನದಲ್ಲಿಟ್ಟುಕೊಂಡು ಅಭ್ಯರ್ಥಿಗಳು ಸಲ್ಲಿಸಬೇಕಾದ ಅರ್ಜಿ ನಮೂನೆಯನ್ನು ಅನುಮೋದನಾ ಸಮಿತಿ ತಯಾರಿಸುವುದು.

ಇ) ಸರ್ಕಾರದ ನೀತಿ: ಆದೇಶಗಳಿಗೆ ಅನುಸಾರವಾಗಿ ಅರ್ಜಿ ನಮೂನೆಯಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುವ ಅಧಿಕಾರ ಅನುಮೋದನೆ ಸಮಿತಿಗೆ ಇದೆ.

ಈ) ತರಬೇತಿಗೆ ಅರ್ಜಿ ಆಹ್ವಾನಿಸುವ ಅಧಿಸೂಚನೆಯನ್ನು ಪ್ರಮುಖ ದಿನ ಪತ್ರಿಕೆಗಳಲ್ಲಿ ಜಾಹಿರಾತುಪಡಿಸುವುದು.

ಉ) ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದ ನಂತರ ಯಾವುದೇ ಅರ್ಜಿಗಳನ್ನು ಅಥವಾ ದಾಖಲೆಗಳನ್ನು ಸ್ವೀಕರಿಸುವುದಿಲ್ಲ.

ಊ) ತರಬೇತಿ ಆಯ್ಕೆಗೆ ಅಭ್ಯರ್ಥಿಗಳು ಅರ್ಹತಾ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರ ಹಾಗೂ ರೋಸ್ಟರ್ ಪದ್ಧತಿಯನ್ನು ಅನುಸರಿಸಲಾಗುವುದು.

4. **ಅರ್ಜಿಗಳ ಬೆಲೆ, ಮುದ್ರಣ ಹಾಗೂ ಸರಬರಾಜು:-**

ಅ) ಅನುಮೋದನೆ ಸಮಿತಿಯು ನಿಗದಿತ ಸಮಯಕ್ಕೆ ಸರಿಯಾಗಿ ಅಭ್ಯರ್ಥಿಗಳಿಗೆ ಅರ್ಜಿಗಳು ದೊರಕುವಂತೆ ಕ್ರಮ ತೆಗೆದುಕೊಳ್ಳುವುದು.

ಆ) ಅರ್ಜಿಗಳನ್ನು ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಚೇರಿಗಳಲ್ಲಿ ವಿತರಿಸಲಾಗುವುದು.

ಇ) ಎಲ್ಲಾ ಅಭ್ಯರ್ಥಿಗಳೂ ಇಲಾಖೆಯಿಂದ ಸರಬರಾಜು ಮಾಡುವ ಅರ್ಜಿಗಳನ್ನು ಮಾತ್ರ ಬಳಸಬೇಕು.

ಈ) ಅನುಮೋದನೆ ಸಮಿತಿ ಅರ್ಜಿಯ ಬೆಲೆಯನ್ನು ಕಾಲಕಾಲಕ್ಕೆ ನಿರ್ಧರಿಸುವುದು.

5. **ಅರ್ಹತೆಗಳು:-**

ತರಬೇತಿಗೆ ಆಯ್ಕೆ ಬಯಸುವ ಅಭ್ಯರ್ಥಿಗಳು ಈ ಕೆಳಗಿನ ಅರ್ಹತೆಗಳನ್ನು ಹೊಂದಿರಬೇಕು.

ಅ) ಪಿಯುಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. (ವೃತ್ತಿಪರ ಪರೀಕ್ಷೆ ಹೊರತುಪಡಿಸಿ)

ಆ) ವಿಧವೆಯರಿಗೆ ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳಿಗೆ ಶೇಕಡಾ 10 ಕೃಪಾಂಕಗಳನ್ನು ಸೇರಿಸಲಾಗುವುದು.

ಇ) ಪ್ರತಿಯೊಂದು ತರಬೇತಿ ಕೇಂದ್ರದಲ್ಲಿಯೂ ಆಯಾ ಜಿಲ್ಲೆಯ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು. ಯಾವುದೇ ಜಿಲ್ಲೆಯಲ್ಲಿ ಅಭ್ಯರ್ಥಿಗಳ ಕೊರತೆ ಉಂಟಾದ ಸಂದರ್ಭದಲ್ಲಿ ಮಾತ್ರ, ಇತರ ಜಿಲ್ಲೆಗಳ ಅಭ್ಯರ್ಥಿಗಳನ್ನು ಅರ್ಹತೆ, ಮೀಸಲಾತಿ ಆಧಾರದ ಮೇಲೆ ಪರಿಗಣಿಸಲಾಗುವುದು.

ಈ) ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಅಡ್ಡಿ ಬರುವಂತಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದಿಲ್ಲ.

ಉ) ಭಾರತೀಯ ನಾಗರೀಕರಾಗಿರುವ ಹಾಗೂ ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಅಥವಾ ಅಂಗೀಕೃತ ಶಾಲೆಯಲ್ಲಿ 12 ವರ್ಷಗಳು ವಿದ್ಯಾಭ್ಯಾಸ ಮಾಡಿರುವ ಅಭ್ಯರ್ಥಿಗಳು ಮಾತ್ರ ಅರ್ಜಿಗಳನ್ನು ಸಲ್ಲಿಸಲು ಅರ್ಹರು.

6. **ಕನಿಷ್ಠ / ಗರಿಷ್ಠ ವಯೋಮಿತಿ: ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸುವ ಕೊನೆಯ ದಿನಾಂಕಕ್ಕೆ**

**ಕನಿಷ್ಠ ವಯೋಮಿತಿ:-**

ಅ) ಎಲ್ಲಾ ಅಭ್ಯರ್ಥಿಗಳು 18 ವರ್ಷ ವಯಸ್ಸನ್ನು ದಾಟಿರಬೇಕು.

**ಗರಿಷ್ಠ ವಯೋಮಿತಿ:-**

ಅ) ಸಾಮಾನ್ಯ ಅರ್ಹತೆಗೆ 25 ವರ್ಷಗಳು.

ಆ) ಯಾವುದೇ ಪ್ರವರ್ಗ, ಗುಂಪಿನ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿಯಲ್ಲಿ ಸಡಿಲಿಕೆ ಇರುವುದಿಲ್ಲ. ಆದರೆ ವಿಧವೆಯರಿಗೆ ವಯೋಮಿತಿಯಲ್ಲಿ 5 ವರ್ಷಗಳ ಸಡಿಲಿಕೆ ನೀಡಲಾಗುವುದು.

7. **ಅಭ್ಯರ್ಥಿಯು ಎಸ್. ಎಸ್. ಎಲ್. ಸಿ. ವರೆಗೆ ಕನ್ನಡ ಭಾಷೆಯನ್ನು ಒಂದು ಕಡ್ಡಾಯ ವಿಷಯವಾಗಿ ತೆಗೆದುಕೊಂಡಿರಬೇಕು.**

8. **ಆಯ್ಕೆಯ ವಿಧಾನ:-**

ಅ. ಜಿಲ್ಲಾ ಮಟ್ಟದ ಆಯ್ಕೆ ಸಮಿತಿಗಳು ಎಲ್ಲಾ ಅಭ್ಯರ್ಥಿಗಳಿಂದ ಸ್ವೀಕರಿಸಿದ ಅರ್ಜಿಗಳನ್ನು ನೋಂದಣಿ ಮಾಡಲಾಗುವುದು.

ಆ. ಅಭ್ಯರ್ಥಿಗಳು ಅರ್ಜಿಗಳಲ್ಲಿ ಒದಗಿಸಿರುವ ಮಾಹಿತಿ ಅಥವಾ ದಾಖಲೆಗಳ ಪ್ರಕಾರ ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಶೇಕಡಾವಾರು ಅಂಕಗಳ ಮತ್ತು ಕೃಪಾಂಕಗಳ ಆಧಾರದ ಮೇಲೆ ಇಳಿಕೆ ಕ್ರಮದಲ್ಲಿ ಅರ್ಹತಾ ಪಟ್ಟಿ ತಯಾರಿಸಲಾಗುವುದು. ಅರ್ಹತಾಪಟ್ಟಿಯನ್ನು ತಯಾರಿಸುವುದಕ್ಕೆ ಮೊದಲು ಸಕಾರಣಗಳಿಗಾಗಿ ತಿರಸ್ಕರಿಸಲ್ಪಟ್ಟ ಅರ್ಜಿಗಳ ಪ್ರತ್ಯೇಕ ಪಟ್ಟಿ ತಯಾರಿಸಲಾಗುವುದು.

ಇ. ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಆದೇಶಗಳಂತೆ ವಿವಿಧ ಪ್ರವರ್ಗಗಳಿಗೆ ಅಥವಾ ಗುಂಪುಗಳಿಗೆ ಮೀಸಲಾತಿಯನ್ನು ಅನುಸರಿಸಲಾಗಿದೆಯೆ ಎಂಬುದನ್ನು ಖಚಿತಪಡಿಸಿಕೊಳ್ಳಲಾಗುವುದು.

ಈ. ಸಾಮಾನ್ಯ ಅರ್ಹತೆ/ ಪರಿಶಿಷ್ಠ ಜಾತಿ/ ಪರಿಶಿಷ್ಟ ಗುಂಪು/ ಇತರ ಹಿಂದುಳಿದ ಪ್ರವರ್ಗಗಳು: ಮತ್ತಿತರ ಮೀಸಲಾತಿ ನಿಯಮಗಳನ್ವಯ ಮುಖ್ಯ ಆಯ್ಕೆ ಪಟ್ಟಿಗಳನ್ನು ತಯಾರಿಸಲಾಗುವುದು.

ಉ. ಆಯ್ಕೆ ಸಮಿತಿಗಳು ಆಯ್ಕೆ ಪಟ್ಟಿಗಳನ್ನಾಗಲೀ ಅಭ್ಯರ್ಥಿಗಳು ಪಡೆದಿರುವ ಅಂಕಗಳನ್ನಾಗಲೀ ಹಾಗೂ ಇತರ ಯಾವುದೇ ವಿವರಗಳನ್ನಾಗಲೀ ಸೂಚನಾ ಫಲಕಗಳಲ್ಲಿ ಪ್ರಕಟಿಸತಕ್ಕದ್ದಲ್ಲ.

ಊ. ಅರ್ಹತಾ ಪಟ್ಟಿಯಿಂದ 1:5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆದು ಆಯ್ಕೆ ಸಮಿತಿ ಸಂದರ್ಶನದ ವೇಳೆಯಲ್ಲಿ ಅಂಕಪಟ್ಟಿ, ಮೀಸಲಾತಿ ದೃಢೀಕರಣ ಪತ್ರ, ವೈದ್ಯಕೀಯ ಪ್ರಮಾಣ ಪತ್ರ ಇತ್ಯಾದಿಗಳನ್ನು ಮೂಲ ಪ್ರಮಾಣ ಪತ್ರದೊಂದಿಗೆ ಪರಿಶೀಲಿಸಿ ದೃಢೀಕರಿಸಬೇಕು.

ಋ. ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿ (ಮೆರಿಟ್ ಕಮ್ ರೋಸ್ಟರ್) ಆಧಾರದ ಮೇಲೆ (ನಿರೀಕ್ಷಣ ಪಟ್ಟಿ ಸಹಿತ) ಆಯ್ಕೆ ಪಟ್ಟಿ ತಯಾರಿಸಲಾಗುವುದು. ಇದೇ ಆಧಾರದ ಮೇಲೆ ಅಧಿಸೂಚಿಸಿದ ಒಟ್ಟು ಸ್ಥಾನಗಳಲ್ಲಿ ಶೇಕಡಾ 10ಕ್ಕೆ ಮೀರದಂತೆ ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ತಯಾರಿಸಲಾಗುವುದು.

9. **ಆಯ್ಕೆ ಸಮಿತಿಗಳು:-**

**ಅ) ರಾಜ್ಯಮಟ್ಟದ, ಅನುಮೋದನೆ ಸಮಿತಿ:**

| | | |
|---|---|---|
| 1. | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್.) ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಅಧ್ಯಕ್ಷರು |
| 2. | ಜಂಟಿ ನಿರ್ದೇಶಕರು ( ಆರ್.ಸಿ.ಹೆಚ್.) ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |

| | | |
|---|---|---|
| 3. | ಮುಖ್ಯ ಆಡಳಿತಾಧಿಕಾರಿಗಳು - II | ಸದಸ್ಯರು |
| 4. | ಸಹಾಯಕ ನಿರ್ದೇಶಕರು ಶುಶ್ರೂಷ (ಜನಾರೋಗ್ಯ) | ಸದಸ್ಯರು |
| 5. | ಆಡಳಿತಾಧಿಕಾರಿ (ಕುಟುಂಬ ಕಲ್ಯಾಣ) | ಸದಸ್ಯ ಕಾರ್ಯದರ್ಶಿ |

**ಆ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಗಳು: ಈ ಕೆಳಕಂಡ ಅಧಿಕಾರಿಗಳನ್ನು ಒಳಗೊಂಡಿರತಕ್ಕದ್ದು.**

| | | |
|---|---|---|
| 1. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | ಅಧ್ಯಕ್ಷರು |
| 2. | ಜಿಲ್ಲಾ ಶಸ್ತ್ರ ಚಿಕಿತ್ಸಕರು ಅಥವಾ ಸಂಸ್ಥೆಯ ಅಧೀಕ್ಷಕರು | ಸದಸ್ಯರು |
| 3. | ಜಿಲ್ಲಾ ಶುಶ್ರೂಷಾ ಅಧಿಕಾರಿ | ಸದಸ್ಯರು |
| 4. | ಜಿಲ್ಲಾ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖಾಧಿಕಾರಿ | ಸದಸ್ಯರು |
| 5. | ಜಿಲ್ಲಾ ಹಿಂದುಳಿದ ವರ್ಗಗಳ ಇಲಾಖಾಧಿಕಾರಿ | ಸದಸ್ಯರು |
| 6. | ಪತ್ರಾಂಕಿತ ಸಹಾಯಕರು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ | ಸದಸ್ಯ ಕಾರ್ಯದರ್ಶಿ |
| 7. | ಪ್ರಾಂಶುಪಾಲರು, ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಶಾಲೆ, ಜಿಲ್ಲಾ ಆಸ್ಪತ್ರೆ | ಸದಸ್ಯರು |

ಅ. ಆಯ್ಕೆ ಸಮಿತಿಗಳು ತಯಾರಿಸಿದ ಆಯ್ಕೆ ಪಟ್ಟಿಯನ್ನು ನಿಗದಿತ ದಿನಾಂಕದ ಒಳಗೆ ಅನುಮೋದನೆ ಸಮಿತಿಗೆ ಅನುಮೋದನೆಗಾಗಿ ಸಲ್ಲಿಸುವುದು. ಆಯ್ಕೆಯಾದ ಹಾಗೂ ಸಂದರ್ಶನಕ್ಕೆ ಹಾಜರಾದ ಅಭ್ಯರ್ಥಿಗಳು ಸಲ್ಲಿಸಿರುವ ಎಲ್ಲಾ ಅರ್ಜಿಗಳನ್ನು/ ದಾಖಲೆಗಳನ್ನು ಸಲ್ಲಿಸುವುದು.

ಆ. ಅನುಮೋದನೆ ಸಮಿತಿಯು ಜಿಲ್ಲಾವಾರು ಆಯ್ಕೆ ಪಟ್ಟಿಗಳನ್ನು ಪರಿಶೀಲಿಸಿ ನಿಯಮಗಳನ್ವಯ ತಯಾರಿಸಲಾಗಿದೆ ಎಂಬುದನ್ನು ಖಚಿತಪಡಿಸಿಕೊಂಡು ಆಯ್ಕೆ ಪಟ್ಟಿಗಳಲ್ಲಿ ತಪ್ಪುಗಳು ಇದ್ದಲ್ಲಿ ಅವುಗಳನ್ನು ಸರಿಪಡಿಸಿ ಅಂತಿಮವಾಗಿ ಆಯ್ಕೆ ಹೊಂದಿದ ಅಭ್ಯರ್ಥಿಗಳಿಗೆ ಆಯ್ಕೆಯ ಆದೇಶವನ್ನು ನೋಂದಣಿ ಅಂಚೆಯಲ್ಲಿ ರವಾನಿಸಲು ಜಿಲ್ಲಾ ಮಟ್ಟದ ಸಮಿತಿಗಳು ಕ್ರಮ ತೆಗೆದುಕೊಳ್ಳುವುದು.

ಇ. ಜಿಲ್ಲಾ ಆಯ್ಕೆ ಸಮಿತಿಯಲ್ಲಿ ಪರಿಶೀಲನೆಗೆ ಮೂಲ ದಾಖಲೆಗಳನ್ನು ಒದಗಿಸದಿರುವ ಯಾವುದೇ ಅಭ್ಯರ್ಥಿಗೂ ಕಾಲಾವಕಾಶ ನೀಡತಕ್ಕದ್ದಲ್ಲ. ಅಂತಹ ಅಭ್ಯರ್ಥಿಯ ಬದಲಾಗಿ ಅರ್ಹತೆಯ ಆಧಾರದ ಮೇಲೆ ಅದೇ ಗುಂಪಿನ ನಂತರದ ಅಭ್ಯರ್ಥಿಯ ಆಯ್ಕೆಯನ್ನು ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಪರಿಗಣಿಸುವುದು.

ಈ. ಯಾವುದೇ ಕೇಂದ್ರದಲ್ಲಿ ಯಾವುದೇ ಪ್ರವರ್ಗದ ಅಭ್ಯರ್ಥಿಗಳು ಅವಶ್ಯಕವಿದ್ದಷ್ಟು ಸಂಖ್ಯೆಯಲ್ಲಿ ಲಭ್ಯವಿಲ್ಲದಿದ್ದಾಗ ಉಳಿದ ಜಿಲ್ಲೆಗಳಲ್ಲಿ ಲಭ್ಯವಿರುವ ಆಯಾ ಪ್ರವರ್ಗದ ಅಭ್ಯರ್ಥಿಗಳ ಅರ್ಹತಾ ಪಟ್ಟಿಯ ಆಧಾರದ ಮೇಲೆ ಆಯ್ಕೆಯನ್ನು ಅನುಮೋದನೆ ಸಮಿತಿ ಪೂರ್ಣಗೊಳಿಸುವುದು.

**10. ತರಬೇತಿ ಸೇರ್ಪಡೆ ಪಠ್ಯಕ್ರಮ ಮತ್ತು ನಿಬಂಧನೆಗಳು:-**

ಅ) ಭಾರತ ಶುಶ್ರೂಷಾ ಪರಿಷತ್ತು ಮತ್ತು ಸರ್ಕಾರದ ಅಂಗೀಕೃತ ಪಠ್ಯಕ್ರಮ ಮತ್ತು ನಿಬಂಧನೆಗಳಿಗೆ ತರಬೇತಿಯು ಒಳಪಟ್ಟಿರುತ್ತದೆ. ಹಾಗೂ ತರಬೇತಿಯು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ಕರ್ತವ್ಯ / ಜವಾಬ್ದಾರಿಗಳನ್ನು ಒಳಗೊಂಡಿರುತ್ತದೆ.

ಆ. ಸರ್ಕಾರವು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿಯ ಅವಧಿಯು ಸರ್ಕಾರ ಕಾಲಕಾಲಕ್ಕೆ ಬದಲಾಯಿಸುವ ನಿಬಂಧನೆಗಳಿಗೆ ತರಬೇತಿ ಒಳಪಟ್ಟಿರುತ್ತದೆ.

**11. ತರಬೇತಿಯ ನಿಬಂಧನೆಗಳು:-**

ಅ) ತರಬೇತಿಯಲ್ಲಿರುವ ಅಭ್ಯರ್ಥಿಯು ವಿವಾಹವಾದಲ್ಲಿ ತರಬೇತಿಗೆ ರಾಜೀನಾಮೆ ಸಲ್ಲಿಸಿರುತ್ತಾರೆಂದು ಪರಿಗಣಿಸಿ ತರಬೇತಿಯಿಂದ ಬಿಡುಗಡೆ ಮಾಡುವುದಲ್ಲದೇ ನೀಡಲಾಗಿರುವ ಶಿಷ್ಯವೇತನವನ್ನು ವಸೂಲಿ ಮಾಡಲಾಗುವುದು.

ಅ) ತರಬೇತಿಯಲ್ಲಿರುವ ಯಾವುದೇ ಅಭ್ಯರ್ಥಿಯು ಗರ್ಭಿಣಿಯಾಗಿರುವುದು ತಿಳಿದು ಬಂದರೆ ತರಬೇತಿಯಿಂದ ವಜಾ ಮಾಡತಕ್ಕದ್ದು ಮತ್ತು ನೀಡಲಾಗಿರುವ ಶಿಷ್ಯವೇತನವನ್ನು ವಸೂಲಿ ಮಾಡಲಾಗುವುದು.

ಇ) ಅಭ್ಯರ್ಥಿಯು ಆಯ್ಕೆಯಾದ ತರಬೇತಿ ಕೇಂದ್ರದಲ್ಲಿಯೇ ತರಬೇತಿಯನ್ನು ಪೂರ್ಣಗೊಳಿಸತಕ್ಕದ್ದು. ತರಬೇತಿ ಮುಂದುವರಿಸಲು ಅಸಾಧ್ಯವೆನಿಸುವಂತಹ ಪ್ರಸಂಗ ತಲೆದೋರಿದಾಗ, ತರಬೇತಿ ಕೇಂದ್ರ ಬದಲಾವಣೆ ಮಾಡುವ ಅಧಿಕಾರವನ್ನು ಇಲಾಖೆಯ ಯೋಜನಾ ನಿರ್ದೇಶಕರು (ಸಂತಾನೋತ್ಪತ್ತಿ ಹಾಗೂ ಮಕ್ಕಳ ಆರೋಗ್ಯ) ಹೊಂದಿರುತ್ತಾರೆ.

ಈ) ತರಬೇತಿ ಅವಧಿಯಲ್ಲಿ ಅಭ್ಯರ್ಥಿಯ ವ್ಯಾಸಂಗ/ ಶಿಸ್ತು/ ನಡತೆ ಅಸಮರ್ಪಕವೆಂದು ಕಂಡುಬಂದಲ್ಲಿ ತರಬೇತಿಯಿಂದ ಬಿಡುಗಡೆ ಮಾಡಲಾಗುವುದು. ಇಂತಹ ಅಭ್ಯರ್ಥಿಗಳ ಬಗ್ಗೆ ಸಂಸ್ಥೆಗಳ ಮುಖ್ಯಸ್ಥರು, ಯೋಜನಾ ನಿರ್ದೇಶಕರ ಆದೇಶ ಪಡೆಯುವುದು.

**12. ಸಾಮಾನ್ಯ ಶಿಸ್ತು:-**

ಅಭ್ಯರ್ಥಿಗಳು ತರಬೇತಿ ಕೇಂದ್ರದ ಮುಖ್ಯಸ್ಥರಾದ ಅಧೀಕ್ಷಕರು/ ಜಿಲ್ಲಾ ಸರ್ಜನರು/ ಪ್ರಾಂಶುಪಾಲರು ಇವರ ಅಧೀನ ಮತ್ತು ಆದೇಶಕ್ಕೆ ಒಳಪಟ್ಟಿರುತ್ತಾರೆ. ಅಭ್ಯರ್ಥಿಗಳು ಕಡ್ಡಾಯವಾಗಿ ತರಬೇತಿ ಕೇಂದ್ರದ ವಿದ್ಯಾರ್ಥಿನಿಲಯದಲ್ಲಿ ವಾಸಿಸತಕ್ಕದ್ದು. ಅಭ್ಯರ್ಥಿಗಳು ಆಸ್ಪತ್ರೆಯ ಮತ್ತು ತರಬೇತಿ ಕೇಂದ್ರದ ಶಿಸ್ತು, ನಿಬಂಧನೆಗಳಿಗೆ ಒಳಪಟ್ಟಿರುತ್ತಾರೆ. ಅಶಿಸ್ತಿನಿಂದ ವರ್ತಿಸುವ ಅಭ್ಯರ್ಥಿಗಳನ್ನು ತರಬೇತಿಯಿಂದ ಬಿಡುಗಡೆ ಮಾಡಲಾಗುವುದು.

**13. ಸಮವಸ್ತ್ರಗಳು:-**

ಕರ್ನಾಟಕ ಶುಶ್ರೂಷಾ ಪರಿಷತ್ತು ಕಾಲಕಾಲಕ್ಕೆ ನಿಗದಿಪಡಿಸಬಹುದಾದ ಸಮವಸ್ತ್ರಗಳನ್ನು ಅಭ್ಯರ್ಥಿಗಳು ಧರಿಸುವುದು.

14. **ಶಿಷ್ಯ ವೇತನ:-** ಸರ್ಕಾರವು ಕಾಲಕಾಲಕ್ಕೆ ನಿಗದಿಪಡಿಸುವ ಶಿಷ್ಯ ವೇತನ (ಸ್ಟೈಫಂಡ್) ವನ್ನು ಮೂಲ ತರಬೇತಿ ಅವಧಿಗೆ ಮಾತ್ರ ಎಲ್ಲಾ ಅಭ್ಯರ್ಥಿಗಳಿಗೆ ನೀಡಲಾಗುವುದು.

15. **ರಜೆ:-**

ಅ) ಭಾರತ ಶುಶ್ರೂಷಾ ಪರಿಷತ್ತು ನಿಗದಿಪಡಿಸಿದಂತೆ, ರಾಜ್ಯ ಸರ್ಕಾರ ಮತ್ತು ರಾಜ್ಯ ಶುಶ್ರೂಷಾ ಪರಿಷತ್ತು ಅಂಗೀಕರಿಸಿದಂತೆ ಲಭ್ಯವಿರುವ ರಜಾ ಸೌಲಭ್ಯವನ್ನು ಅಭ್ಯರ್ಥಿಗಳಿಗೆ ನೀಡಲಾಗುವುದು.

ಆ) ನಿಯಮಾವಳಿ ರೀತ್ಯಾ ರಜೆ ತೆಗೆದುಕೊಂಡ ವಿದ್ಯಾರ್ಥಿನಿಯು ಒಂದು ವೇಳೆ ರಜೆ ಮುಗಿದ ನಂತರ ತರಬೇತಿಗೆ ಹಾಜರಾಗದಿದ್ದರೆ ಅಂತಹ ವಿದ್ಯಾರ್ಥಿನಿ ತರಬೇತಿಗೆ ಹಾಜರಾಗುವಂತೆ ನೋಟಿಸ್ ನೀಡಬೇಕು. ತಿಳುವಳಿಕೆ ಪತ್ರ ಹೊರಡಿಸಿದ ಒಂದು ತಿಂಗಳ ನಂತರವೂ ವಿದ್ಯಾರ್ಥಿನಿಯು ತರಬೇತಿಗೆ ಹಾಜರಾಗದಿದ್ದರೆ ತರಬೇತಿಯನ್ನು ತ್ಯಜಿಸಿರುವಳೆಂದು ತೀರ್ಮಾನಿಸಿ ತರಬೇತಿ ಅವಧಿಯಲ್ಲಿ ನೀಡಲಾದ ಶಿಷ್ಯವೇತನವನ್ನು ವಸೂಲಿ ಮಾಡಲಾಗುವುದು.

ಇ) ಯಾವುದೇ ಅಭ್ಯರ್ಥಿ ಗೈರುಹಾಜರಾದಲ್ಲಿ, ಎಚ್ಚರಿಕೆ ನೋಟಿಸು ನೀಡುವುದು. ಮೂರು ಸಾರಿ ಗೈರು ಹಾಜರಾದವರ ಹೆಸರನ್ನು ಯೋಜನಾ ನಿರ್ದೇಶಕರಿಗೆ ಸಲ್ಲಿಸಿ ಅವರು ನಿಯಮಾನುಸಾರ ಕ್ರಮ ಜರುಗಿಸುವರು.

16. **ರಾಜೀನಾಮೆ:-**

ಅಭ್ಯರ್ಥಿಯು ತರಬೇತಿ ಅವಧಿ ಮುಗಿಯುವ ಮುನ್ನ ವೈದ್ಯಕೀಯ ಕಾರಣದ ಹೊರತಾಗಿ ತರಬೇತಿಯನ್ನು ಬಿಡಲು ಇಚ್ಛಿಸಿದಲ್ಲಿ ಒಂದು ತಿಂಗಳು ಮುಂಚಿತವಾಗಿ ತರಬೇತಿ ಕೇಂದ್ರದ ಮುಖ್ಯಸ್ಥರಿಗೆ ತಿಳುವಳಿಕೆ ಪತ್ರ ನೀಡಬೇಕು. ತರಬೇತಿ ಅವಧಿಯಲ್ಲಿ ಪಡೆಯಲಾದ ಶಿಷ್ಯವೇತನವನ್ನು ಸರ್ಕಾರಕ್ಕೆ ಜಮಾ ಮಾಡಲಾಗುವುದು.

ಅಭ್ಯರ್ಥಿಯು ವೈದ್ಯಕೀಯ ಕಾರಣದ ಮೇಲೆ ತರಬೇತಿ ಮುಂದುವರೆಸಲಾಗದಿದ್ದರೆ ಸರ್ಕಾರಿ ವೈದ್ಯರಿಂದ ಪಡೆದ ವೈದ್ಯಕೀಯ ಪ್ರಮಾಣ ಪತ್ರ ಸಹಿತ ದೃಢೀಕರಿಸಬೇಕು ಮತ್ತು ಅಂತಹ ಪ್ರಮಾಣ ಪತ್ರ ತರಬೇತಿ ಕೇಂದ್ರದ ಮುಖ್ಯಸ್ಥರಿಂದ ತೃಪ್ತಿಕರವಾಗಿದೆಯೆಂದು ದೃಢೀಕರಿಸಲ್ಪಡಬೇಕು.

17. **ಪರೀಕ್ಷೆಗಳು:-**

ಅ) ಭಾರತ ಶುಶ್ರೂಷಾ ಪರಿಷತ್ತು ನಿಗದಿಪಡಿಸಿದಂತೆ ರಾಜ್ಯ ಸರ್ಕಾರ ಮತ್ತು ರಾಜ್ಯ ಶುಶ್ರೂಷಾ ಪರಿಷತ್ತು ಒಪ್ಪಿಕೊಂಡಿರುವ ಪಠ್ಯಕ್ರಮ ಮತ್ತು ನಿಬಂಧನೆಗಳನುಸಾರ ಮತ್ತು ರಾಜ್ಯ ಸರ್ಕಾರ ಕಾಲಕಾಲಕ್ಕೆ ನೀಡುವ ನಿರ್ದೇಶನದನ್ವಯ ಪರೀಕ್ಷಾ ಮಂಡಳಿಯಿಂದ ಪರೀಕ್ಷೆಗಳನ್ನು ನಡೆಸಲಾಗುವುದು. ರಾಜ್ಯ ಶುಶ್ರೂಷಾ ಪರಿಷತ್ತಿನ ಅಧ್ಯಕ್ಷರನ್ನು ಒಳಗೊಂಡಿರುವ ಹಾಗೂ ಇಲಾಖೆಯ ಕಾರ್ಯಕ್ರಮ ಅಧಿಕಾರಿಗಳು/ ತರಬೇತಿ ಕೇಂದ್ರಗಳ ಪ್ರಾಂಶುಪಾಲರು/ ಜಿಲ್ಲಾ ಶುಶ್ರೂಷಾಧಿಕಾರಿಗಳು ಮತ್ತಿತರ ಅಧಿಕಾರಿಗಳನ್ನೊಳಗೊಂಡ ಪರೀಕ್ಷಾ ಮಂಡಳಿಯ ರಚನೆಗೆ ಸರ್ಕಾರದ ಪೂರ್ವಾನುಮೋದನೆ ಪಡೆಯುವುದು.

ಆ) ಪರೀಕ್ಷೆಗಳನ್ನು ನಡೆಸಲು ಪ್ರಶ್ನೆ ಪತ್ರಿಕೆಗಳನ್ನು ಸಿದ್ದಪಡಿಸುವ ಜವಾಬ್ದಾರಿ ಮತ್ತು ಕರ್ತವ್ಯ ಪರೀಕ್ಷಾ ಮಂಡಳಿಯದು. ಪರೀಕ್ಷಾ ಮಂಡಳಿಯು ಈ ನಿಟ್ಟಿನಲ್ಲಿ ರಾಜ್ಯ ಶುಶ್ರೂಷಾ ಪರಿಷತ್ತಿನ ಸಲಹೆ ಪಡೆಯಬಹುದು.

ಇ. ಎಲ್ಲಾ ಕೇಂದ್ರಗಳ ಅಭ್ಯರ್ಥಿಗಳ ಕೇಂದ್ರಿಕೃತ ಪರೀಕ್ಷೆಗಳು ಮುಕ್ತಾಯವಾದ ಮಾರನೇಯ ದಿನದಿಂದಲೇ ಕೇಂದ್ರಿಕೃತ ಮೌಲ್ಯ ಮಾಪನ ನಡೆಸುವ ವ್ಯವಸ್ಥೆ ಮಾಡುವುದು ಪರೀಕ್ಷಾ ಮಂಡಳಿಯ ಕರ್ತವ್ಯವಾಗಿದೆ.

ಈ. ಉತ್ತೀರ್ಣರಾದ ಎಲ್ಲಾ ಅಭ್ಯರ್ಥಿಗಳಿಗೂ ಏಕರೂಪದ ಅಂಕಪಟ್ಟಿಯನ್ನು ಪರೀಕ್ಷಾ ಮಂಡಳಿ ನೀಡತಕ್ಕದ್ದು. ಅಂಕಪಟ್ಟಿಯ ಮಾದರಿಯನ್ನು ಪರೀಕ್ಷಾ ಮಂಡಳಿ ಸಿದ್ದಪಡಿಸತಕ್ಕದ್ದು ಅಂಕ ಪಟ್ಟಿಗಳಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ/ ಯೋಜನಾ ನಿರ್ದೇಶಕರು/ ಶುಶ್ರೂಷಾ ರಿಜಿಸ್ಟ್ರಾರ್, ಕರ್ನಾಟಕ ಶುಶ್ರೂಷಾ ಪರಿಷತ್ತು ಮತ್ತು ಸಹಾಯಕ ನಿರ್ದೇಶಕರು, ಶುಶ್ರೂಷಾ ಜನಾರೋಗ್ಯ ಇವರ ಸಹಿ ಇರಬೇಕು. ಅಂಕಪಟ್ಟಿಗಳನ್ನು ಯೋಜನಾ ನಿರ್ದೇಶಕರ ಕಾರ್ಯಾಲಯದಿಂದ ಹೊರಡಿಸಬೇಕು.

ಉ. ಈ ಕೆಳಗಿನ ಸದಸ್ಯರನ್ನೊಳಗೊಂಡ ಪರೀಕ್ಷಾ ಮಂಡಳಿ ರಚಿಸಿ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರ ನೀಡಲು ಅನುಕೂಲವಾಗುವಂತೆ ಅಭ್ಯರ್ಥಿಗಳಿಂದ ಎಷ್ಟು ಶುಲ್ಕ ವಸೂಲಿ ಮಾಡಬೇಕು ಎಂಬ ಬಗ್ಗೆ ನಿರ್ಧರಿಸಬೇಕು. ಪರೀಕ್ಷಾ ಮಂಡಳಿಯಲ್ಲಿರುವ ಸದಸ್ಯರು...

| | | |
|---|---|---|
| 1. | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್.) | ಅಧ್ಯಕ್ಷರು |
| 2. | ಸಹಾಯಕ ನಿರ್ದೇಶಕರು ಶುಶ್ರೂಷ (ಜನಾರೋಗ್ಯ) | ಉಪಾಧ್ಯಕ್ಷರು |
| 3. | ಶುಶ್ರೂಷ ರಿಜಿಸ್ಟ್ರಾರ್ ಕರ್ನಾಟಕ ನರ್ಸಿಂಗ್ ಕೌನ್ಸಿಲ್, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| 4. | ಪ್ರಾಂಶುಪಾಲರು, ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರದ 6 ಪ್ರಾಂಶುಪಾಲರನ್ನು (ಸರದಿ ಪ್ರಕಾರ ಒಂದು ಪರೀಕ್ಷೆ ಅವಧಿಗೆ ಮಾತ್ರ ಜೇಷ್ಠತೆಯ ಆಧಾರದ ಮೇಲೆ ನೇಮಿಸುವುದು) | ಸದಸ್ಯರು |

ಊ. ಪ್ರಥಮ ಬಾರಿಗೆ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಅಭ್ಯರ್ಥಿಗೆ ಪುನಃ ಎರಡು ಬಾರಿ ಮಾತ್ರ ಸ್ವಂತ ಖರ್ಚಿನಲ್ಲಿ ಪರೀಕ್ಷೆಗೆ ಕುಳಿತುಕೊಳ್ಳಲು ಅವಕಾಶ ನೀಡಲಾಗುವುದು. ಆ ನಂತರ ವಿಶೇಷ ಸಂದರ್ಭಗಳಲ್ಲಿ ಮಾತ್ರ ಪರೀಕ್ಷಾ ಮಂಡಳಿಯ ಅನುಮತಿಯ ಮೇರೆಗೆ ಮತ್ತೊಮ್ಮೆ ಪರೀಕ್ಷೆಗೆ ಕುಳಿತುಕೊಳ್ಳುವ ಅವಕಾಶ ನೀಡಲಾಗುವುದು.

ಪ್ರಥಮ ಬಾರಿಗೆ ತೇರ್ಗಡೆಯಾಗದ ಅಭ್ಯರ್ಥಿಗೆ ಪುನಃ ಶಿಷ್ಯವೇತನ ನೀಡಲಾಗುವುದಿಲ್ಲ.

ಶೇಕಡಾ 75 ರಷ್ಟು ಹಾಜರಾತಿ ಹೊಂದಿರುವ ವಿದ್ಯಾರ್ಥಿಗಳು (ಅಧಿಕೃತವಾಗಿ ಪಡೆದ ರಜಾ ಅವಧಿಯೂ ಸೇರಿದಂತೆ) ಮಾತ್ರ ಪರೀಕ್ಷೆಗೆ ಕುಳಿತುಕೊಳ್ಳಲು ಅರ್ಹರು.

**18. ತರಬೇತಿಯಿಂದ ವಜಾ:-**

ಅ. ಸುಳ್ಳು ಪ್ರಮಾಣ ಪತ್ರಗಳನ್ನು ಸಲ್ಲಿಸಿ ತರಬೇತಿಗೆ ಸೇರಿರುವುದು ಕಂಡುಬಂದರೆ ತರಬೇತಿಯಿಂದ ವಜಾ ಮಾಡಲಾಗುವುದಲ್ಲದೇ ಪಡೆಯಲಾದ ಶಿಷ್ಯವೇತನವನ್ನು ಮತ್ತು ದಂಡವಾಗಿ ಒಂದು ತಿಂಗಳ ಶಿಷ್ಯವೇತನಕ್ಕೆ ಸಮನಾದ ಹಣವನ್ನು ಸಹ ವಸೂಲಿ ಮಾಡಲಾಗುವುದು.

ಆ. ಅಭ್ಯರ್ಥಿಯ ತರಬೇತಿ ಅವಧಿಯಲ್ಲಿ ಅನಧಿಕೃತ ಗೈರು ಹಾಜರಿಯಾದರೆ, ದುರ್ನಡತೆ, ಅವಿಧೇಯತೆ, ಅನುಚಿತ ವರ್ತನೆ, ನಿರ್ಲಕ್ಷತೆ ಅಥವಾ ಬೇರಾವುದೇ ಕಾರಣಗಳಿಂದ ತರಬೇತಿ ಮುಂದುವರೆಸಲು ಅನರ್ಹರೆಂದು ಕಂಡುಬಂದರೆ ತರಬೇತಿ ಕೇಂದ್ರದ ಮುಖ್ಯಸ್ಥರು ಅಂತಹ ವಿದ್ಯಾರ್ಥಿಗೆ ನೋಟಿಸು ಜಾರಿ ಮಾಡಿ, ಸಮಜಾಯಿಷಿ ಪಡೆದು, ಯೋಜನ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು. ಯೋಜನ ನಿರ್ದೇಶಕರು ಅನುಮತಿ ನೀಡಿದ ನಂತರ ತರಬೇತಿಯಿಂದ ವಜಾ ಮಾಡಲಾಗುವುದು.

ಮೇಲೆ ತಿಳಿಸಿದ ಕಾರಣಗಳಿಗಾಗಿ ವಜಾ ಮಾಡಲಾದ ಅಭ್ಯರ್ಥಿನಿಯು ಪುನಃ ತರಬೇತಿಗೆ ಸೇರಲು ಅನುಮತಿ ನೀಡಲಾಗುವುದಿಲ್ಲ.

ಇ. **ಉತ್ತೀರ್ಣರಾದ ಅಭ್ಯರ್ಥಿಗಳ ನೇಮಕಾತಿ:** ತರಬೇತಿಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳಿಗೆ ಸರ್ಕಾರಿ ಸೇವೆಗೆ ನೇಮಕ ಹೊಂದುವ ಹಕ್ಕು ಪ್ರಾಪ್ತವಾಗುವುದಿಲ್ಲ.

ಆದಾಗ್ಯೂ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಸರ್ಕಾರವು ನೇಮಕಾತಿ ಆದೇಶವಿತ್ತಲ್ಲಿ ಕನಿಷ್ಠ 5 ವರ್ಷಗಳು ಇಲಾಖೆಯಲ್ಲಿ ಕಡ್ಡಾಯವಾಗಿ ಸೇವೆ ಸಲ್ಲಿಸುವ ಷರತ್ತಿಗೆ ಬದ್ಧರಾಗಿರುತ್ತಾರೆ.

**19. ಪ್ರಮಾಣ ಪತ್ರ ನೀಡಿಕೆ:-**

ಅ. ತರಬೇತಿ ಪೂರೈಸಿದ ನಂತರ ಪ್ರಮಾಣ ಪತ್ರವನ್ನು ನೀಡಲು ಯೋಜನಾ ನಿರ್ದೇಶಕರು, ಅಧಿಕಾರ ಹೊಂದಿರುತ್ತಾರೆ.

ಆ. ಡೂಪ್ಲಿಕೇಟ್ ಪ್ರಮಾಣ ಪತ್ರ ಕೋರ ಬಯಸುವ ಸಂದರ್ಭಗಳಲ್ಲಿ ಅಭ್ಯರ್ಥಿಗಳು 100/- ರೂ. ಶುಲ್ಕವನ್ನು ಸರ್ಕಾರಕ್ಕೆ (ಪರೀಕ್ಷಾ ಮಂಡಳಿಗೆ) ಜಮಾ ಮಾಡಿದ ರಸೀತಿಯೊಂದಿಗೆ ಅಫಿಡೇವಿಟ್ ಹಾಗೂ ಇಲಾಖೆಯ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸುವುದು.

**20. ಕರಾರು ಪತ್ರ:-**

ತರಬೇತಿಗೆ ಸೇರಿದ ಅಭ್ಯರ್ಥಿಗಳು ಅನುಬಂಧದಲ್ಲಿ ಸೂಚಿಸಿರುವ ರೀತಿಯಲ್ಲಿ ಲಿಖಿತ ಕರಾರು ಪತ್ರವನ್ನು ಸಲ್ಲಿಸಬೇಕು.

ಲಿಖಿತ ಕರಾರಿನ ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಅಭ್ಯರ್ಥಿಗೆ ನೀಡಲಾದ ಒಂದು ತಿಂಗಳ ಶಿಷ್ಯವೇತನ ಹಾಗೂ ಅದೇ ಮೊತ್ತದ ಹಣವನ್ನು ದಂಡವಾಗಿ ವಸೂಲಿ ಮಾಡಲಾಗುವುದು. ಇದನ್ನು ಭೂಕಂದಾಯ ಬಾಕಿಯೆಂದೂ ವಸೂಲಿ ಮಾಡಬಹುದಾಗಿದೆ.

**21.** ಈ ನಿಯಮಗಳನ್ನು ಅನುಷ್ಠಾನಗೊಳಿಸಲು ಸಡಿಲಿಕೆ ಅಗತ್ಯವಿದ್ದಲ್ಲಿ ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್.) ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರದಿಂದ ಪೂರ್ವಾನುಮತಿ ಪಡೆಯತಕ್ಕದ್ದು.

**22.** ತರಬೇತಿ ನಿಯಮಾವಳಿಗಳ ಕುರಿತು ಸರ್ಕಾರಿ ಆದೇಶ ಸಂಖ್ಯೆ: ಹೆಚ್.ಎಫ್.ಡಬ್ಲ್ಯೂ. 299/ ಹೆಚ್.ಎಸ್.ಎಂ. 81, ದಿನಾಂಕ: 23-2-1982 ರ ಆದೇಶ ತಕ್ಷಣದಿಂದ ರದ್ದಾಗುತ್ತದೆ.

**ಆರ್. ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಅನುಬಂಧ

ಕರ್ನಾಟಕ ರಾಜ್ಯದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ಸಲ್ಲಿಸಬೇಕಾದ ಕರಾರು ಪತ್ರ.

ರಾಜ್ಯದ ಆರೋಗ್ಯ ಮತ್ತು ಕು. ಕ. ಸೇವೆಗಳ ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ......................... ದಿನಾಂಕ: ...................... ಅನುಸಾರ ಸದರಿ ಸಂಸ್ಥೆಯಲ್ಲಿ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯ ತರಬೇತಿಗೆ ಆಯ್ಕೆಯಾಗಿರುವ ಕುಮಾರಿ/ ಶ್ರೀಮತಿ ...................................... ತಂದೆ / ತಾಯಿ/ ಪತಿ ................................ ವಿಳಾಸ ....................................................... ಇಲ್ಲಿ ವಾಸಿಸುತ್ತಿರುವ ನಾನು ಮತ್ತು ಈ ಕೆಳಗೆ ತಿಳಿಸಿರುವ ಮತ್ತು ಸಹಿ ಮಾಡಿರುವ ಜಾಮೀನುದಾರರು ಒಟ್ಟಾಗಿ ಮತ್ತು ಪ್ರತ್ಯೇಕವಾಗಿ ಕರ್ನಾಟಕ ರಾಜ್ಯಪಾಲರನ್ನು ಪ್ರತಿನಿಧಿಸುವ ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು ಇವರಿಗೆ ಬರೆದುಕೊಟ್ಟಿರುವ ಕರಾರು ಪತ್ರವೇನೆಂದರೆ-

ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ತರಬೇತಿಗೆ ಸಂಬಂಧಿಸಿದಂತೆ ಸರ್ಕಾರಿ ಆದೇಶ ...................... ದಿನಾಂಕ ...... ಇದರಲ್ಲಿ ವಿಧಿಸಲಾಗಿರುವ ಮತ್ತು ಸರ್ಕಾರ / ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್) ಕಾಲಕಾಲಕ್ಕೆ ಈ ಸಂಬಂಧ ವಿಧಿಸುವ ಎಲ್ಲಾ ಷರತ್ತು/ ನಿಬಂಧನೆಗಳನ್ನು ಒಪ್ಪಿದ್ದೇವೆ ಮತ್ತು ಈ ಮೂಲಕ ಅದಕ್ಕೆ ಬದ್ಧರಾಗಿರುತ್ತೇವೆ.

ನನ್ನ ತರಬೇತಿಗೆ ಸಂಬಂಧಿಸಿದಂತೆ ಯಾವುದೇ ಆರ್ಥಿಕ ನಷ್ಟವು ಸರ್ಕಾರಕ್ಕೆ ಉಂಟಾದಲ್ಲಿ ಕರಾರುದಾರಳಾದ ನಾನು ಮತ್ತು ಈ ಕೆಳಗೆ ಸಹಿ ಮಾಡಿರುವ ಜಾಮೀನುದಾರರುಗಳಾದ ನಾವುಗಳು ನಮಗೆ ಸಂಬಂಧಿಸಿದ ವಾರಸುದಾರರು/ ಕಾರ್ಯನಿರ್ವಾಹಕರು/ ಆಡಳಿತಗಾರರು/ ಕಾನೂನು ಪ್ರತಿನಿಧಿಗಳು ಒಟ್ಟಾಗಿ ಮತ್ತು ಪ್ರತ್ಯೇಕವಾಗಿ ಸಂದಾಯ ಮಾಡಲು ಬದ್ಧರಾಗಿರುತ್ತೇವೆ. ಅಲ್ಲದೆ ಸರ್ಕಾರಕ್ಕೆ ತಗಲಬಹುದಾದ ಎಲ್ಲಾ ಶುಲ್ಕ ವೆಚ್ಚಗಳನ್ನು ವಕೀಲರು ಮತ್ತು ಕಕ್ಷಿದಾರರು ಎಲ್ಲಾ ವೆಚ್ಚಗಳೊಂದಿಗೆ ಸರ್ಕಾರ ನಿಗದಿಪಡಿಸುವ ಅವಧಿಯೊಳಗೆ ಸಂದಾಯ ಮಾಡಲಾಗುವುದು. ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿಯನ್ನು ಭೂಕಂದಾಯ ಬಾಕಿಯೆಂದು ಸಹ ನಮ್ಮಿಂದ ವಸೂಲಿ ಮಾಡಿಕೊಳ್ಳಲು ನಾವು ಒಪ್ಪಿರುತ್ತೇವೆ.

ಎರಡು ಸಾವಿರದ .................. ಇಸವಿ .................. ತಿಂಗಳಿಗೆ ................ ದಿನವಾದ ಇಂದು ನಾವುಗಳು ಅಂದರೆ ಮೇಲೆ ತಿಳಿಸಿದ ಕರಾರುದಾರರು ಮತ್ತು ಜಾಮೀನುದಾರರುಗಳು ಸಹಿ ಮಾಡಿರುತ್ತೇವೆ.

ಸಹಿ/

ಕರಾರುದಾರರು

1. ಸಹಿ

ಜಾಮೀನುದಾರರು

ವಿಳಾಸ

2. ಸಹಿ

ಜಾಮೀನುದಾರರು

ವಿಳಾಸ

**ಆರ್. ಎಸ್. ಇಟಗಿ**

ಪಿ. ಆರ್. 1497

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ-1

### ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್‌ಎಲ್ 2003, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003

ಸರ್ಕಾರವು 2004ನೇ ವರ್ಷಕ್ಕೆ ಮಂಜೂರು ಮಾಡಿರುವ ಸಾರ್ವತ್ರಿಕ ರಜಾ ದಿನಗಳ ಪಟ್ಟಿಯನ್ನು ಸಾರ್ವಜನಿಕ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

ಎಲ್ಲಾ ಎರಡನೇ ಶನಿವಾರಗಳು ಮತ್ತು ಭಾನುವಾರಗಳು ಹಾಗೂ:

| ಕ್ರ. ಸಂ. | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 1 | 15-01-2004 | ಗುರುವಾರ | ಉತ್ತರಾಯಣ ಪುಣ್ಯಕಾಲ, ಸಂಕ್ರಾಂತಿ ಹಬ್ಬ |
| 2 | 26-01-2004 | ಸೋಮವಾರ | ಗಣ ರಾಜ್ಯೋತ್ಸವ |
| 3 | 02-02-2004 | ಸೋಮವಾರ | ಬಕ್ರೀದ್ |
| 4 | 18-02-2004 | ಬುಧವಾರ | ಮಹಾ ಶಿವರಾತ್ರಿ |
| 5 | 02-03-2004 | ಮಂಗಳವಾರ | ಮೊಹರಂ ಕಡೇ ದಿನ |
| 6 | 03-04-2004 | ಶನಿವಾರ | ಮಹಾವೀರ ಜಯಂತಿ |
| 7 | 09-04-2004 | ಶುಕ್ರವಾರ | ಗುಡ್ ಫ್ರೈಡೇ |
| 8 | 14-04-2004 | ಬುಧವಾರ | ಡಾ॥ ಅಂಬೇಡ್ಕರ್ ಜಯಂತಿ |
| 9 | 22-04-2004 | ಗುರುವಾರ | ಶ್ರೀ ಬಸವೇಶ್ವರ ಜಯಂತಿ |
| 10 | 01-05-2004 | ಶನಿವಾರ | ಕಾರ್ಮಿಕ ದಿನಾಚರಣೆ |
| 11 | 03-05-2004 | ಸೋಮವಾರ | ಈದ್ ಮಿಲಾದ್ |
| 12 | 18-09-2004 | ಶನಿವಾರ | ಶ್ರೀ ವರಸಿದ್ಧಿ ವಿನಾಯಕ ವ್ರತ |
| 13 | 02-10-2004 | ಶನಿವಾರ | ಮಹಾತ್ಮ ಗಾಂಧಿ ಜಯಂತಿ |
| 14 | 13-10-2004 | ಬುಧವಾರ | ಮಹಾಲಯ ಅಮಾವಾಸ್ಯೆ |
| 15 | 22-10-2004 | ಶುಕ್ರವಾರ | ಮಹಾನವಮಿ, ಆಯುಧ ಪೂಜೆ |
| 16 | 23-10-2004 | ಶನಿವಾರ | ವಿಜಯದಶಮಿ |
| 17 | 01-11-2004 | ಸೋಮವಾರ | ಕನ್ನಡ ರಾಜ್ಯೋತ್ಸವ |
| 18 | 11-11-2004 | ಗುರುವಾರ | ನರಕ ಚತುರ್ದಶಿ |
| 19 | 15-11-2004 | ಸೋಮವಾರ | ಖುತುಬ್-ಎ-ರಂಜಾನ್ |
| 20 | 25-12-2004 | ಶನಿವಾರ | ಕ್ರಿಸ್‌ಮಸ್ |

**ಸೂಚನೆ :-**

1. ಈ ಪಟ್ಟಿಯಲ್ಲಿ ಭಾನುವಾರಗಳಂದು ಬರುವ ಚಂದ್ರಮಾನ ಯುಗಾದಿ (21-03-2004), ಸ್ವಾತಂತ್ರ್ಯ ದಿನಾಚರಣೆ (15-08-2004) ಹಾಗೂ 2ನೇ ಶನಿವಾರದಂದು ಬರುವ ಬಲಿಪಾಡ್ಯಮಿ (13-11-2004) ರಜಾ ದಿನಗಳನ್ನೊಳಗೊಂಡಿರುವುದಿಲ್ಲ.
2. ಸಾರ್ವತ್ರಿಕ ರಜಾ ದಿನಗಳಲ್ಲಿ ರಾಜ್ಯಾದ್ಯಂತ ಸರ್ಕಾರಿ ಕಛೇರಿಗಳು ಮುಚ್ಚಲ್ಪಡುತ್ತವೆ. ಕಛೇರಿಯ ಜರೂರು ಕೆಲಸವನ್ನು ವಿಲೇವಾರಿ ಮಾಡುವ ಬಗ್ಗೆ ಇಲಾಖಾ ಮುಖ್ಯಸ್ಥರುಗಳು ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

3. ಈ ಪಟ್ಟಿಯಲ್ಲಿ ಸೇರಿಸಲಾಗಿರುವ ಮುಸಲ್ಮಾನ್ ಹಬ್ಬಗಳು ನಿಗದಿತ ದಿನಾಂಕಗಳಂದು ಬೀಳದಿದ್ದರೆ, ಸರ್ಕಾರಿ ಸೇವೆಯಲ್ಲಿರುವ ಮುಸಲ್ಮಾನರಿಗೆ ನಿಗದಿತ ರಜೆಗೆ ಬದಲಾಗಿ ಹಬ್ಬದ ದಿವಸ ರಜಾ ಮಂಜೂರು ಮಾಡಬಹುದು.
4. ದಿನಾಂಕ 17-10-2004 (ಭಾನುವಾರ) ದಂದು ತುಲಾ ಸಂಕ್ರಮಣ ಹಾಗೂ ದಿನಾಂಕ 28-11-2004 (ಭಾನುವಾರ) ರಂದು ಹುತ್ತರಿ ಹಬ್ಬ ಈ ಎರಡೂ ಹಬ್ಬಗಳು ಭಾನುವಾರಗಳಂದು ಬರುವುದರಿಂದ ಕೊಡಗು ಜಿಲ್ಲೆಗೆ ಮಾತ್ರ ಅನ್ವಯವಾಗುವಂತೆ ಸ್ಥಳೀಯ ಸಾರ್ವತ್ರಿಕ ರಜೆಯನ್ನು ಘೋಷಿಸಿರುವುದಿಲ್ಲ.
5. ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಪ್ರತ್ಯೇಕ ರಜಾ ದಿನಗಳ ಪಟ್ಟಿಯನ್ನು ಬೆಂಗಳೂರಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಪ್ರಕಟಿಸುವರು.
6. ಸಾರ್ವತ್ರಿಕ ರಜಾ ದಿನಗಳ ಜೊತೆಗೆ ರಾಜ್ಯ ಸರ್ಕಾರಿ ನೌಕರರು 2 ದಿವಸಗಳಿಗೆ ಮೀರದಂತೆ 2004ನೇ ವರ್ಷದಲ್ಲಿ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಪರಿಮಿತ ರಜೆಯನ್ನು ಪೂರ್ವಾನುಮತಿ ಪಡೆದು ಉಪಯೋಗಿಸಿಕೊಳ್ಳಬಹುದು. ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಲು ಅಧಿಕಾರವುಳ್ಳ ಅಧಿಕಾರಿಗಳು ಪ್ರಸ್ತುತ ಅನುಮತಿಗೆ ಮಂಜೂರಾತಿ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿಯಾವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯಶಿಷ್ಟಾಚಾರ).

## ಅಧಿಸೂಚನೆ-1 ರ ಅನುಬಂಧ

## ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್‌ಎಲ್ 2003, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003

2004ನೇ ವರ್ಷಕ್ಕೆ ರಾಜ್ಯ ಸರ್ಕಾರಿ ನೌಕರರಿಗೆ ಇರುವ ಪರಿಮಿತ ರಜಾ ದಿನಗಳ ಪಟ್ಟಿ.

| ಕ್ರ. ಸಂ. | ದಿನಾಂಕ | ವಾರಗಳು | ಪರಿಮಿತ ರಜಾ ದಿನಗಳು |
|---|---|---|---|
| 1 | 01-01-2004 | ಗುರುವಾರ | ನೂತನ ವರ್ಷಾರಂಭ |
| 2 | 30-01-2004 | ಶುಕ್ರವಾರ | ಮಧ್ವ ನವಮಿ |
| 3 | 06-03-2004 | ಶನಿವಾರ | ಹೋಳಿ ಹಬ್ಬ |
| 4 | 30-03-2004 | ಮಂಗಳವಾರ | ಶ್ರೀ ರಾಮನವಮಿ |
| 5 | 13-04-2004 | ಮಂಗಳವಾರ | ಸೌರಮಾನ ಯುಗಾದಿ |
| 6 | 24-04-2004 | ಶನಿವಾರ | ಶ್ರೀ ಶಂಕರಾಚಾರ್ಯ ಜಯಂತಿ |
| 7 | 04-05-2004 | ಮಂಗಳವಾರ | ಬುದ್ಧ ಪೂರ್ಣಿಮಾ |
| 8 | 27-08-2004 | ಶುಕ್ರವಾರ | ಶ್ರೀ ವರ ಮಹಾಲಕ್ಷ್ಮೀ ವ್ರತ |
| 9 | 28-08-2004 | ಶನಿವಾರ | ಋಗ್ ಉಪಾಕರ್ಮ / ತಿರು ಓಣಂ |
| 10 | 06-09-2004 | ಸೋಮವಾರ | ಶ್ರೀ ಕೃಷ್ಣ ಜನ್ಮಾಷ್ಟಮಿ |
| 11 | 17-09-2004 | ಶುಕ್ರವಾರ | ಸ್ವರ್ಣಗೌರಿ ವ್ರತ |
| 12 | 27-09-2004 | ಸೋಮವಾರ | ಅನಂತ ಪದ್ಮನಾಭ ವ್ರತ |
| 13 | 01-10-2004 | ಶುಕ್ರವಾರ | ಷಬ್-ಎ-ಬರಾತ್ |
| 14 | 12-11-2004 | ಶುಕ್ರವಾರ | ಜಮತ್-ಉಲ್-ವಿದಾ |
| 15 | 26-11-2004 | ಶುಕ್ರವಾರ | ಗುರುನಾನಕ್ ಜಯಂತಿ |
| 16 | 29-11-2004 | ಸೋಮವಾರ | ಭಕ್ತ ಕನಕದಾಸ ಜಯಂತಿ |
| 17 | 24-12-2004 | ಶುಕ್ರವಾರ | ಕ್ರಿಸ್‌ಮಸ್ ಈವ್ |

**ಸೂಚನೆ :-**

ಈ ರಜಾ ಪಟ್ಟಿಯು ಭಾನುವಾರಗಳಂದು ಬರುವ ಶ್ರೀ ರಾಮಾನುಜ ಜಯಂತಿ (25-04-2004), ಯಜುರ್ ಉಪಾಕರ್ಮ (29-08-2004), ತುಲಾ ಸಂಕ್ರಮಣ (17-10-2004), ಹುತ್ತರಿ ಹಬ್ಬ (28-11-2004) ಹಾಗೂ 2 ನೇ ಶನಿವಾರದಂದು ಬರುವ ಪವಿತ್ರ ಶನಿವಾರ (10-04-2004) ಮತ್ತು ಸಾರ್ವತ್ರಿಕ ರಜಾ ದಿನದಂದು ಬರುವ ಷಬ್-ಎ-ಖಾದರ್ (11-11-2004) ಗಳನ್ನೊಳಗೊಂಡಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿಯಾವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯಶಿಷ್ಟಾಚಾರ).

## ಅಧಿಸೂಚನೆ-2

### ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್ಎಲ್ 2003, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20: 25: 26 ಪಿಯುಬಿ, 1 ದಿನಾಂಕ: 15-06-1957 ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್ 1881 ರ (1881 ರ ಅಧಿನಿಯಮ ಸಂಖ್ಯೆ 26) 25ನೇ ಸೆಕ್ಷನ್ ನಲ್ಲಿರುವ ವಿವರಣೆಯಂತೆ 2004ನೇ ವರ್ಷದಲ್ಲಿ ಈ ಕೆಳಗಿನ ದಿನಗಳನ್ನು ಕರ್ನಾಟಕ ರಾಜ್ಯದಾದ್ಯಂತ ಸಾರ್ವಜನಿಕ ರಜೆಗಳೆಂದು ಘೋಷಿಸಲಾಗಿದೆ.

| ಕ್ರ. ಸಂ. | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 1 | 15-01-2004 | ಗುರುವಾರ | ಉತ್ತರಾಯಣ ಪುಣ್ಯಕಾಲ, ಸಂಕ್ರಾಂತಿ ಹಬ್ಬ |
| 2 | 26-01-2004 | ಸೋಮವಾರ | ಗಣ ರಾಜ್ಯೋತ್ಸವ |
| 3 | 02-02-2004 | ಸೋಮವಾರ | ಬಕ್ರೀದ್ |
| 4 | 18-02-2004 | ಬುಧವಾರ | ಮಹಾ ಶಿವರಾತ್ರಿ |
| 5 | 02-03-2004 | ಮಂಗಳವಾರ | ಮೊಹರಂ ಕಡೇ ದಿನ |
| 6 | 01-04-2004 | ಗುರುವಾರ | ವಾರ್ಷಿಕ ಬ್ಯಾಂಕ್ ಲೆಕ್ಕಪತ್ರ ಮುಕ್ತಾಯ ದಿನ |
| 7 | 14-04-2004 | ಬುಧವಾರ | ಡಾ।। ಅಂಬೇಡ್ಕರ್ ಜಯಂತಿ |
| 8 | 01-05-2004 | ಶನಿವಾರ | ಕಾರ್ಮಿಕ ದಿನಾಚರಣೆ |
| 9 | 18-09-2004 | ಶನಿವಾರ | ಶ್ರೀ ವರಸಿದ್ಧಿ ವಿನಾಯಕ ವ್ರತ |
| 10 | 30-09-2004 | ಗುರುವಾರ | ಅರ್ಧವಾರ್ಷಿಕ ಬ್ಯಾಂಕ್ ಲೆಕ್ಕಪತ್ರ ಮುಕ್ತಾಯ ದಿನ |
| 11 | 02-10-2004 | ಶನಿವಾರ | ಮಹಾತ್ಮ ಗಾಂಧಿ ಜಯಂತಿ |
| 12 | 13-10-2004 | ಬುಧವಾರ | ಮಹಾಲಯ ಅಮಾವಾಸ್ಯೆ |
| 13 | 22-10-2004 | ಶುಕ್ರವಾರ | ಮಹಾನವಮಿ, ಆಯುಧ ಪೂಜೆ |
| 14 | 01-11-2004 | ಸೋಮವಾರ | ಕನ್ನಡ ರಾಜ್ಯೋತ್ಸವ |
| 15 | 11-11-2004 | ಗುರುವಾರ | ನರಕ ಚತುರ್ದಶಿ |
| 16 | 15-11-2004 | ಸೋಮವಾರ | ಖುತುಬ್-ಎ-ರಂಜಾನ್ |
| 17 | 25-12-2004 | ಶನಿವಾರ | ಕ್ರಿಸ್‌ಮಸ್ |

1. ಈ ರಜಾ ಪಟ್ಟಿಯು ಭಾನುವಾರದಂದು ಬರುವ ಸ್ವಾತಂತ್ರ್ಯ ದಿನಾಚರಣೆ (15-8-2004)ನ್ನು ಒಳಗೊಂಡಿರುವುದಿಲ್ಲ.
2. ದಿನಾಂಕ 17-10-2004 (ಭಾನುವಾರ) ದಂದು ತುಲಾ ಸಂಕ್ರಮಣ ಹಾಗೂ ದಿನಾಂಕ 28-11-2004 (ಭಾನುವಾರ) ರಂದು ಹುತ್ತರಿ ಹಬ್ಬ ಈ ಎರಡೂ ಹಬ್ಬಗಳು ಭಾನುವಾರಗಳಂದು ಬರುವುದರಿಂದ ಕೊಡಗು ಜಿಲ್ಲೆಗೆ ಮಾತ್ರ ಅನ್ವಯವಾಗುವಂತೆ ಸ್ಥಳೀಯ ಸಾರ್ವತ್ರಿಕ ರಜೆಯನ್ನು ಘೋಷಿಸಿರುವುದಿಲ್ಲ.
3. ಈ ರಜಾ ದಿನಗಳು ವಾಣಿಜ್ಯ ಬ್ಯಾಂಕ್ ಹಾಗೂ ಸಹಕಾರಿ ಬ್ಯಾಂಕ್‌ಗಳ ವಾರ್ಷಿಕ : ಅರ್ಧವಾರ್ಷಿಕ, ಲೆಕ್ಕಪತ್ರ ಮುಕ್ತಾಯಕ್ಕೆ ಮಾತ್ರ ಅನ್ವಯವಾಗುತ್ತದೆ. ಈ ದಿವಸಗಳಲ್ಲಿ ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾ ಕಛೇರಿಯು ಕಾರ್ಯನಿರ್ವಹಿಸುತ್ತದೆ. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಈ ಹಿಂದಿನ ವರ್ಷಗಳಲ್ಲಿ ಇದ್ದಂತೆ ಜೂನ್ 30 ಮತ್ತು ಡಿಸೆಂಬರ್ 31 ವಾರ್ಷಿಕ ಹಾಗೂ ಅರ್ಧವಾರ್ಷಿಕ ಲೆಕ್ಕಪತ್ರ ಮುಕ್ತಾಯದ ದಿನಗಳಾಗಿರುತ್ತವೆ. (ಈ ದಿನಗಳು ಭಾನುವಾರ ಅಥವಾ ಸಾರ್ವಜನಿಕ ರಜೆ ಎಂದು ಬಂದಲ್ಲಿ ಆ ತಿಂಗಳ ಕೊನೆಯ ಕೆಲಸದ ದಿನವು ಲೆಕ್ಕಪತ್ರ ಮುಕ್ತಾಯ ದಿನವಾಗಿರುತ್ತದೆ).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿಯಾವುಲ್ಲಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯಶಿಷ್ಟಾಚಾರ).

## DEPARTMENT OF PERSONNEL AND ADMINISTRATION REFORMS SECRETARIAT

## NOTIFICATION - I

### No. DPAR 12 HHL 2003, BANGALORE, DATED: 27th NOVEMBER 2003

The following list of General Holidays sanctioned by the Government for the year 2004 is published for general information. All Second Saturdays Sundays and

| Sl. No. | Date | Days | Public Holidays |
|---|---|---|---|
| 1 | 15-01-2004 | Thursday | Uttarayana Punyakala/Makara Sankranthi |
| 2 | 26.01.2004 | Monday | Republic Day |
| 3 | 02.02.2004 | Monday | Bakrid |
| 4 | 18-02-2004 | Wednesday | Mahashivarathri |
| 5 | 02.03.2004 | Tuesday | Last day of Moharam |
| 6 | 03.04.2004 | Saturday | Mahaveer Jayanthi |

| | | | |
|---|---|---|---|
| 7 | 09.04.2004 | Friday | Good Friday |
| 8 | 14.04.2004 | Wednesday | Dr. Ambedkar Jayanthi |
| 9 | 22.04.2004 | Thursday | Sri Basaveshwara Jayanthi |
| 10 | 01.05.2004 | Saturday | May day |
| 11 | 03.05.2004 | Monday | Id-Milad |
| 12 | 18.09.2004 | Saturday | Sri. Varasiddi Vinayaka Vratha |
| 13 | 02.10.2004 | Saturday | Mahatma Gandhi Jayanthi |
| 14 | 13.10.2004 | Wednesday | Mahalaya Amavasya |
| 15 | 22.10.2004 | Friday | Mahanavami/Ayudha Pooja |
| 16 | 23.10.2004 | Saturday | Vijayadashami |
| 17 | 01.11.2004 | Monday | Kannada Rajyothsava |
| 18 | 11.11.2004 | Thursday | Naraka Chathurdashi |
| 19 | 15.11.2004 | Monday | Khutab-e-Ramzan |
| 20 | 25.12.2004 | Saturday | Christmas |

**Note :-**

1. This list does not include Chandramana Ugadi (21.03.2004), Independence Day (15.08.2004) which falls on Sundays and Bali Padyami (13.11.2004) which falls on Second Saturday.
2. Government Offices will be closed through out the state on General Holidays. However Heads of Department should make necessary Arrangements for the discharge of urgent work.
3. If any of the Muslim Holidays notified above does not fall on the date notified Muslims in Government Service may be granted Holiday on the Date of observance in lieu of the Holidays already notified.
4. Local Holidays only for Kodagu District are not declared for Tula Sankramana 17-10-2004 (Sunday) and Huthri Festival on 28-11-2004 (Sunday) as both festivals falls on Sunday.
5. Separate list of Holidays will be published by the commissioner of public Instructions Bangalore for the Education Department.
6. In addition to the General Holidays the State Government Employees may utilise any of the Restricted Holidays not exceeding two days during the year 2004 with previous permission from the authority who is authorise to sanction casual leave.

By Order and in the name of Governor of Karnataka,

**S. ZIYAULLAH**

Under Secretary to Government,

Department of Personnel and Administrative Reforms (State Protocol).

**ANNEXURE TO NOTIFICATION - I**

**No. DPAR 12 HHL 2003, BANGALORE, DATED: 27th NOVEMBER 2003**

List of Restricted Holidays for the State Government Employees for the year 2004.

| Sl. No. | Date | Days | Restricted Holidays |
|---|---|---|---|
| 1 | 01.01.2004 | Thursday | New Year's Day |
| 2 | 30.01.2004 | Friday | Madhwa Navami |
| 3 | 06-03-2004 | Saturday | Holi Festival |
| 4 | 30.03.2004 | Tuesday | Shri Ramanavami |
| 5 | 13.04.2004 | Tuesday | Souramana Ugadi |
| 6 | 24.04.2004 | Saturday | Shri Shankaracharya Jayanthi |
| 7 | 04.05.2004 | Tuesday | Buddha Poornima |
| 8 | 27.08.2004 | Friday | Varamahalakshmi Vratha |
| 9 | 28.08.2004 | Saturday | Rig Upakarma |
| 10 | 06.09.2004 | Mondya | Shri Krishna Janmashtami |
| 11 | 17.09.2004 | Friday | Swarna Gowri Vratha |
| 12 | 27.09.2004 | Monday | Anantha Padmanabha Vratha |
| 13 | 01.10.2004 | Friday | Shab-e-Barath |
| 14 | 12.11.2004 | Friday | Jamat-Ul-Vida |
| 15 | 26.11.2004 | Friday | Guru Nanak Jayanthi |
| 16 | 29.11.2004 | Monday | Bhakta Kanaka Dasa Jayanthi |
| 17 | 24.12.2004 | Friday | Christmas Eve |

This list does not include Sri. Ramanujacharya Jayanthi (25.04.2004), Yajur Upakarma (29.8.2004), Tula Sankramana (17.10.2004), Huthri Festival (28.11.2004) which falls on Sundays and Holy Saturday (10.4.2004), which falls on Second Saturday and Shab-e-Quadar (11.11.2004) which falls on General Holiday.

By Order and in the name of Governor of Karnataka,

**S. ZIYAULLAH**

Under Secretary to Government,

Department of Personnel and Administrative Reforms (State Protocol).

**NOTIFICATION - II**

**No. DPAR 12 HHL 2003, BANGALORE, DATED: 27th NOVEMBER 2003**

Under the explanation of Section 25 of the Negotiable Instruments Act 1881 (Act No. XXVI of 1881) read with Notification No. 20/ 25/ 26/ Pub-I Dt. 15-06-1957 of the Government of India Ministry of Home Affairs the following shall be Public Holidays throughout the State of Karnataka during the year 2004.

| Sl. No. | Date | Days | Public Holidays |
|---|---|---|---|
| 1 | 15.01.2004 | Thursday | Uttarayana Punyakal Sankranthi |
| 2 | 26.01.2004 | Monday | Republic day |
| 3 | 02-02-2004 | Monday | Bakrid |
| 4 | 18.02.2004 | Wednesday | Maha Shivaratri |
| 5 | 02.03.2004 | Tuesday | Last day of Moharam |
| 6 | 01.04.2004 | Thursday | Yearly Closing of Bank Accounts |
| 7 | 14.04.2004 | Wednesday | Dr. Ambedkar Jayanthi |
| 8 | 01.05.2004 | Saturday | May Day |
| 9 | 18.09.2004 | Saturday | Shri Varasiddhi Vinayaka Vratha |
| 10 | 30.09.2004 | Thursday | Half yearly Closing of Bank Accounts |
| 11 | 02.10.2004 | Saturday | Mahatma Gandhi Jayanthi |
| 12 | 13.10.2004 | Wednesday | Mahalaya Amavasya |
| 13 | 22.10.2004 | Friday | Mahanavami Ayudha Pooja |
| 14 | 01.11.2004 | Monday | Kannada Rajyothsava |
| 15 | 11.11.2004 | Thursday | Naraka Chathudashi |
| 16 | 15.11.2004 | Monday | Khutub-e-Ramzan |
| 17 | 25.12.2004 | Saturday | Christmas |

1. This list does not include Independence Day (15-8-2004), which falls on Sunday.
2. Local Holidays only for Kodagu District are not declared for Tula Sankramana 17-10-2004 (Sunday) and Huthri Festival on 28-11-2004 (Sunday) as both festivals falls on Sundays.
3. These holidays are declared for closing of Accounts of Commercial Banks and Co-operative Banks. The Reserve Bank of India will be functioning on these days. There is however no change in the day of closing of accounts of Reserve Bank of India which continues to be 30th June and 31st December (However if these days are Sundays or General Holidays. The Last working day of the month will be the day for Closing of Accounts).

By Order and in the name of Governor of Karnataka,

P. R. 1499

**S. ZIYAULLAH**

Under Secretary to Government,

Department of Personnel and Administrative Reforms (State Protocol).

**ಶಿಕ್ಷಣ ಸಚಿವಾಲಯ**

**ಸುತ್ತೋಲೆ ಸಂಖ್ಯೆ: ಇಡಿ 133 ಪಿಬಿಎಸ್ 03, ಬೆಂಗಳೂರು, ದಿನಾಂಕ: 21ನೇ ನವೆಂಬರ್, 2003**

**ವಿಷಯ:** ಸರ್ಕಾರದ ಅಧಿಸೂಚನೆ / ಆದೇಶಗಳನ್ನು ಮುದ್ರಿಸುವಲ್ಲಿ ಉಂಟಾಗುತ್ತಿರುವ ವಿಳಂಬ ತಪ್ಪಿಸುವ ಬಗ್ಗೆ.

ಸರ್ಕಾರದ ಅಧೀನ ಶಾಸನ ರಚನಾ ಸಮಿತಿಯ 29ನೇ ವರದಿಯಲ್ಲಿ ಸರ್ಕಾರಿ ಮುದ್ರಣಾಲಯಕ್ಕೆ ಸಂಬಂಧಿಸಿದಂತೆ ಈ ಕೆಳಗಿನಂತೆ ಶಿಫಾರಸ್ಸು ಮಾಡಿದೆ.

ಸರ್ಕಾರಿ ಮುದ್ರಣಾಲಯ, ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಮುದ್ರಣಾಲಯದಲ್ಲಿ ಅಧಿಸೂಚನೆ/ ಆದೇಶಗಳನ್ನು ಮುದ್ರಿಸಿ ಕೊಡುವಲ್ಲಿ ವಿಳಂಬವಾಗುತ್ತಿರುವುದರಿಂದ ಸದನಗಳಲ್ಲಿ ಮಂಡಿಸಲು ಕೆಲವು ಇಲಾಖೆಗಳು ತಡವಾಗಿ ಅಧಿಸೂಚನೆಗಳನ್ನು ಕಳುಹಿಸುತ್ತಿವೆ. ಈ ವಿಳಂಬವನ್ನು ತಪ್ಪಿಸಲು ಸಂಬಂಧಪಟ್ಟ ಇಲಾಖೆಗಳ ಹಾಗೂ ಮುದ್ರಣಾಲಯದ ನಿರ್ದೇಶಕರಿಗೆ ಸೂಕ್ತ ನಿರ್ದೇಶನ ನೀಡಬೇಕೆಂದು ಸಮಿತಿಯು ಸೂಚಿಸುತ್ತದೆ.

ಈ ಹಿನ್ನೆಲೆಯಲ್ಲಿ ರಾಜ್ಯದ ವಿವಿಧ ಇಲಾಖೆಗಳಿಂದ ಸರ್ಕಾರಿ ಮುದ್ರಣಾಲಯಕ್ಕೆ ರಾಜ್ಯ ಪತ್ರ/ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಣೆಗಾಗಿ ಬರುವ ಸರ್ಕಾರದ ಅಧಿಸೂಚನೆ/ ಆದೇಶಗಳನ್ನು ಯಾವುದೇ ವಿಳಂಬವಿಲ್ಲದೆ ಇನ್ನೂ ಮುಂದೆ ಸಕಾಲದಲ್ಲಿ ಪ್ರಕಟಣೆ ಮಾಡುವಂತೆ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆ ಇಲಾಖೆ, ಬೆಂಗಳೂರು ಇವರಿಗೆ ಸೂಚಿಸಲಾಗಿದೆ.

ರಾಜ್ಯಪತ್ರ/ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸಲ್ಪಟ್ಟ ಅಧಿಸೂಚನೆಗಳು/ ಆದೇಶಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಂದೇ ಪೂರ್ಣ ಪ್ರಮಾಣದ ಪ್ರತಿಗಳನ್ನು ಸಂಬಂಧಪಟ್ಟ ಇಲಾಖೆಯವರು ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆ ಇಲಾಖೆಯಿಂದ ಪಡೆದುಕೊಂಡು ಸಂಬಂಧಿಸಿದ ಪ್ರಾಧಿಕಾರಿಗಳಿಗೆ ತಲುಪಿಸುವ ವ್ಯವಸ್ಥೆ ಮಾಡುವಂತೆ ಸಹ ಈ ಮೂಲಕ ಸೂಚಿಸಲಾಗಿದೆ.

**ಬಿ. ಹೆಚ್. ಪಡಸಲಗಿ**

ಪಿ. ಆರ್. 1505

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಗೋವಾ ವಿಮೋಚನಾ ಚಳುವಳಿಗಾರರಿಗೆ ಗೌರವಧನ ಬಾಕಿ ಹಣ ಮಂಜೂರಾತಿಯ ಬಗ್ಗೆ.

**ಓದಲಾಗಿದೆ:**

1. ದಿನಾಂಕ: 29-1-1991ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 1347 ಪಿಎಫ್‌ಎಸ್ 87.
2. ದಿನಾಂಕ: 12-8-1991 ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 1347 ಪಿಎಫ್‌ಎಸ್ 87.
3. ದಿನಾಂಕ: 5-4-93 ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4264 ಪಿಪಿಜಿ 92.
4. ದಿನಾಂಕ: 8-7-93ರ ಶ್ರೀ ಜಿ. ಎಲ್. ರಾಮರೆಡ್ಡಿಯವರ ಪತ್ರ.
5. ದಿನಾಂಕ: 2-4-94ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4264 ಪಿಪಿಜಿ 92.
6. ದಿನಾಂಕ: 19-4-95ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4264 ಪಿಪಿಜಿ 92.
7. ದಿನಾಂಕ: 13-7-94ರಂದು ರಿಟ್ ಅರ್ಜಿ ಸಂಖ್ಯೆ: 15125-223/ 94 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಮಾನ.
8. ದಿನಾಂಕ: 15-1-97 ರಂದು ರಿಟ್ ಮೇಲ್ಮನವಿ ಸಂಖ್ಯೆ: 52-179, 2879-966, 3367-97, 3286-301/95, ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಮಾನ.
9. ದಿನಾಂಕ: 29-11-97ರ ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 09 ಪಿಪಿಜಿ 97.
10. ದಿನಾಂಕ: 31-3-2000ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 09 ಪಿಪಿಜಿ 97.
11. ದಿನಾಂಕ: 3-3-2001ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 01 ಪಿಪಿಜಿ 2001.
12. ದಿನಾಂಕ: 24-12-2002 ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 17 ಪಿಪಿಜಿ 2002.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿ ಓದಲಾದ ದಿನಾಂಕ: 29-1-91ರ ಸರ್ಕಾರದ ಆದೇಶದಲ್ಲಿ, ದಿನಾಂಕ: 21-02-69ರ ಸರ್ಕಾರದ ಆದೇಶದಲ್ಲಿ ಜಾರಿಗೆ ತಂದ ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವಧನ ಪರಿಯೋಜನೆ 1969ಕ್ಕೆ ತಿದ್ದುಪಡಿ ಮಾಡಿ, 1955-56ರ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದವರಿಗೆ ಗೌರವಧನ ಮಂಜೂರು ಮಾಡಲು ಅವಕಾಶ ಕಲ್ಪಿಸಿ ಆ ಯೋಜನೆಯನ್ನು ದಿನಾಂಕ: 1-1-1991 ರಿಂದ ಜಾರಿಗೊಳಿಸಲಾಗಿತ್ತು.

ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಅಧಿಕೃತ ದಾಖಲೆಗಳು ಲಭ್ಯವಿಲ್ಲದ ಕಾರಣದಿಂದಾಗಿ ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 12-08-91ರ ಸರ್ಕಾರದ ಆದೇಶದಲ್ಲಿ ಶ್ರೀ ಜಿ. ಎಲ್. ರಾಮರೆಡ್ಡಿಯವರನ್ನು ತಂಡದ ನಾಯಕರನ್ನಾಗಿ ನೇಮಿಸಿ ಅವರು ಪ್ರಮಾಣಪತ್ರ ನೀಡಿದವರಿಗೆ ಸಲಹಾ ಸಮಿತಿಯ ಅಭಿಪ್ರಾಯದೊಂದಿಗೆ ಗೌರವಧನ ಮಂಜೂರು ಮಾಡಲಾಗುತ್ತಿತ್ತು.

ಗೋವಾ ವಿಮೋಚನಾ ಚಳುವಳಿಗಾರರ ಹತ್ತಿರ ಯಾವುದೇ ರೀತಿಯ ದಾಖಲಾತಿಗಳು ಇಲ್ಲದಿದ್ದುದರಿಂದಲೂ ಹಾಗೂ ಕೇವಲ ತಂಡದ ನಾಯಕರಾದ ಶ್ರೀ ಜಿ. ಎಲ್. ರಾಮರೆಡ್ಡಿಯವರು ನೀಡಿದ ಪ್ರಮಾಣ ಪತ್ರದ ಮೇರೆಗೆ ಗೌರವಧನವನ್ನು ಮಂಜೂರು ಮಾಡಬೇಕಾದ ಪರಿಸ್ಥಿತಿ ಇದ್ದುದರಿಂದ, ಈ ಯೋಜನೆಯು ಸಾಕಷ್ಟು ದುರುಪಯೋಗಗೊಂಡು ವಿಧಾನ ಮಂಡಲದ ಉಭಯ ಸದನಗಳಲ್ಲಿಯೂ ಕೂಡ ಇದರ ವ್ಯಾಪಕ ದುರ್ಬಳಕೆ ಬಗ್ಗೆ ಚರ್ಚಿಸಲಾಯಿತು.

ಉಲ್ಲೇಖ (3)ರಲ್ಲಿ ಓದಲಾದ ದಿನಾಂಕ: 5-4-93ರ ಸರ್ಕಾರದ ಆದೇಶದಲ್ಲಿ ಯೋಜನೆಯು ಸಮರ್ಪಕವಾಗಿ ಕೆಲಸ ಮಾಡದ ಕಾರಣ, ಸರ್ಕಾರವು ಈ ಯೋಜನೆಯನ್ನು ಸಮಗ್ರವಾಗಿ ಪುನರ್ ಅವಲೋಕಿಸಿ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಸತ್ಯಾಗ್ರಹಿಗಳಿಗೆ ಗೌರವಧನ ಮಂಜೂರು ಮಾಡುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಲ್ಲಿಸಲಾಯಿತು.

ಉಲ್ಲೇಖ (4)ರಲ್ಲಿ ಓದಲಾದ ದಿನಾಂಕ: 8-7-93ರ ತಮ್ಮ ಪತ್ರದಲ್ಲಿ ಶ್ರೀ ಜಿ. ಎಲ್ ರಾಮರೆಡ್ಡಿರವರು ತಮ್ಮ ಸಹಿಯನ್ನು ಫೋರ್ಜರಿ ಮಾಡಲಾಗಿದೆ ಎಂದು ತಿಳಿಸಿದ್ದರು.

ಗೋವಾ ಗೌರವಧನ ಮಂಜೂರಾದವುಗಳಲ್ಲಿ ಬಹುತೇಕ ಪ್ರಕರಣಗಳು ಸುಳ್ಳೆಂದು ಸಚಿವರು, ಶಾಸಕರು ಹಾಗೂ ಇತರ ಗಣ್ಯ ವ್ಯಕ್ತಿಗಳು ಸಹ ದೂರುಗಳನ್ನು ಸಲ್ಲಿಸಿದ ಕಾರಣ ಸರ್ಕಾರವು ಈ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ, ಉಲ್ಲೇಖ (5)ರಲ್ಲಿ ಓದಲಾದ ದಿನಾಂಕ: 2-4-94ರ ಸರ್ಕಾರದ ಆದೇಶದಲ್ಲಿ ಅದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿದ್ದ 1943 ಆದೇಶಗಳಲ್ಲಿ ಮಂಜೂರಾಗಿದ್ದ ಎಲ್ಲಾ ಗೋವಾ ವಿಮೋಚನಾ ಚಳುವಳಿಗಾರರ ಗೌರವಧನವನ್ನು ದಿನಾಂಕ: 1-4-94ರಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಯಿತು.

ಉಲ್ಲೇಖ (6)ರಲ್ಲಿ ಓದಲಾದ ದಿನಾಂಕ: 19-4-95ರ ಸರ್ಕಾರದ ಆದೇಶದಲ್ಲಿ ಗೋವಾ ವಿಮೋಚನಾ ಚಳುವಳಿಗಾರರಿಗೆ ಗೌರವಧನ ಮಂಜೂರು ಮಾಡಲು ಹೊರಡಿಸಲಾಗಿದ್ದ ದಿನಾಂಕ: 29-1-91ರ ಸರ್ಕಾರದ ಆದೇಶದಲ್ಲಿ 1969ರ ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವಧನ ಪರಿಯೋಜನೆಗೆ ಮಾಡಿದ್ದ ತಿದ್ದುಪಡಿ ಹಾಗೂ ಅದಕ್ಕೆ ಸಂಬಂಧಿಸಿದ ಎಲ್ಲಾ ಅಧಿಕೃತ ಜ್ಞಾಪನಗಳನ್ನು ಮತ್ತು ಆದೇಶಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಯಿತು.

ದಿನಾಂಕ: 2-4-94ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4264 ಪಿಪಿಜಿ 92ರಿಂದ ಪರಿಣಾಮಕ್ಕೊಳಗಾದವರಲ್ಲಿ ಕೆಲವು ಗೋವಾ ವಿಮೋಚನಾ ಚಳುವಳಿಗಾರರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲು ಮಾಡಿದ್ದರು. ಕರ್ನಾಟಕ ಉಚ್ಚ ನ್ಯಾಯಾಲಯ ಉಲ್ಲೇಖ (7)ರಲ್ಲಿ ಓದಲಾದ ದಿನಾಂಕ: 13-7-94ರಂದು ರಿಟ್ ಅರ್ಜಿ ಸಂಖ್ಯೆ: 15125-223/94 ರಲ್ಲಿ ನೀಡಿದ ತನ್ನ ತೀರ್ಪಿನಲ್ಲಿ ದಿನಾಂಕ: 2-4-94ರ ಸರ್ಕಾರದ ಆದೇಶವನ್ನು ರದ್ದುಗೊಳಿಸಿ, ಅರ್ಜಿದಾರರಿಗೆ ನೋಟೀಸ್‌ನ್ನು ನೀಡಿ ಅವರ ಅಹವಾಲನ್ನು ಕೇಳಿ ಪುನರ್ ಪರಿಗಣಿಸಬೇಕೆಂದು ನಿರ್ದೇಶಿಸಿತ್ತು.

ಉಲ್ಲೇಖ (8)ರಲ್ಲಿ ಓದಲಾದ ದಿನಾಂಕ: 15-01-97ರ ತನ್ನ ತೀರ್ಪಿನಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠವು ಸಹ ಏಕಪೀಠ ತೀರ್ಪನ್ನು ಎತ್ತಿ ಹಿಡಿದು ಯೋಜನೆ ಹಿಂತೆಗೆದುಕೊಂಡ ದಿನಾಂಕದವರೆಗೆ ಅರ್ಜಿದಾರರಿಗೆ ಸೌಲಭ್ಯದಿಂದ ವಂಚಿತರನ್ನಾಗಿ ಮಾಡುವುದು ಸಾಧುವಲ್ಲ ಹಾಗೂ ಅರ್ಜಿದಾರರು ಈ ಯೋಜನೆ ಜಾರಿಯಲ್ಲಿರುವವರೆಗೆ ಪಿಂಚಣಿಗೆ ಅರ್ಹರಾಗಿರುತ್ತಾರೆ ಎಂದು ಆದೇಶಿಸಿತ್ತು.

ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳಿಲ್ಲದಿದ್ದರಿಂದಲೇ ಈ ಯೋಜನೆ ಹಿಂತೆಗೆದುಕೊಂಡಿದ್ದರಿಂದಲೂ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಕೇವಲ ಶ್ರೀ ಜಿ.ಎಲ್. ರಾಮರೆಡ್ಡಿಯವರು ಪರಿಶೀಲಿಸಿ ನೀಡಿದ ಪ್ರಮಾಣ ಪತ್ರಗಳ ಆಧಾರದ ಮೇಲೆ ಗೌರವಧನ ಹಣವನ್ನು ಪಾವತಿ ಮಾಡಬೇಕಾಗಿರುವುದರಿಂದ, ಈ 1943 ಪ್ರಕರಣಗಳಲ್ಲಿ ಇರತಕ್ಕಂತಹ ನಕಲಿ ಸಹಿ ಪ್ರಮಾಣ ಪತ್ರಗಳನ್ನು ಹೊರತುಪಡಿಸಲು ಶ್ರೀ ಜಿ.ಎಲ್. ರಾಮರೆಡ್ಡಿಯವರ ಸಹಾಯ ಕೋರಲಾಗಿತ್ತು. ವಿಳಂಬ ಹಾಗೂ ವ್ಯಾಜ್ಯಗಳನ್ನು ಕಡಿಮೆ ಮಾಡುವ ಉದ್ದೇಶದಿಂದ ಹಾಗೂ ಯೋಜನೆಯನ್ನು ಹಿಂತೆಗೆದುಕೊಂಡಿರುವುದರಿಂದ, ಶ್ರೀ ಜಿ. ಎಲ್. ರಾಮರೆಡ್ಡಿ ಯವರು ತಮ್ಮದೆ ಸಹಿ ಎಂದು ಗುರ್ತಿಸಿದ ಪ್ರಮಾಣಪತ್ರಗಳ ಪ್ರಕರಣಗಳಲ್ಲಿ ಗೌರವಧನ ಬಾಕಿ ಪಾವತಿ ಮಾಡುವ ಮಟ್ಟಿಗೆ ಮಾತ್ರ ಈ ಆದೇಶವನ್ನು ಹೊರಡಿಸಲು ನಿರ್ಧರಿಸಲಾಗಿದೆ. ಈ ಪ್ರಮಾಣ ಪತ್ರಗಳು ಅರ್ಜಿದಾರರು ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿ ನೈಜತೆಯ ಬಗ್ಗೆ ಯಾವುದೇ ರೀತಿಯಲ್ಲಿ ದೃಢಪಡಿಸಿರುವುದಿಲ್ಲ ಹಾಗೂ ಸರ್ಕಾರ ಒಪ್ಪಿಕೊಂಡಿರುವುದಿಲ್ಲ.

ಉಲ್ಲೇಖ (9)ರಿಂದ 12ರಲ್ಲಿ ಓದಲಾದ ದಿನಾಂಕ: 29-11-97, 31-3-2000, 3-3-2001 ಮತ್ತು 24-12-2002ರ ಸರ್ಕಾರದ ಆದೇಶಗಳಲ್ಲಿ ದಿನಾಂಕ: 1-4-94 ರಿಂದ 19-4-95ರವರೆಗೆ ರದ್ದುಪಡಿಸಲಾಗಿದ್ದ ಗೋವಾ ಗೌರವಧನವನ್ನು ನ್ಯಾಯಾಲಯದ ಆದೇಶದ ಆಧಾರದ ಮೇಲೆ ಪರಿಶೀಲಿಸಿದ ಸರ್ಕಾರವು ಈ ಬಗ್ಗೆ ದೃಢೀಕರಣ ನೀಡಿದ 1279 ಪ್ರಕರಣಗಳಿಗೆ ಮಾತ್ರ ಗೌರವಧನ ಬಾಕಿ ಹಣವನ್ನು ಮಂಜೂರು ಮಾಡಲಾಗಿತ್ತು.

ಶ್ರೀ ಜಿ. ಎಲ್. ರಾಮರೆಡ್ಡಿಯವರ 24 ಪ್ರಕರಣಗಳಲ್ಲಿ ತಮ್ಮ ಸಹಿ ನೈಜವೆಂದು ದೃಢೀಕರಿಸಿರುವ ಹಿನ್ನೆಲೆಯಲ್ಲಿ ಅವರುಗಳಿಗೆ ಬಾಕಿ ಹಣವನ್ನು ಮಂಜೂರು ಮಾಡಲು ನಿರ್ಧರಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 119 ಪಿಎಫ್‌ಜಿ 2001, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳಿಲ್ಲದ್ದರಿಂದ, ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಶ್ರೀ ಜಿ. ಎಲ್. ರಾಮರೆಡ್ಡಿಯವರು ಪರಿಶೀಲಿಸಿ ನೀಡಿರುವ ಪ್ರಮಾಣಪತ್ರಗಳ ಆಧಾರದ ಮೇರೆಗೆ ಗೌರವಧನ ಬಾಕಿ ಹಣವನ್ನು ಪಾವತಿ ಮಾಡುವ ಏಕ ಉದ್ದೇಶದಿಂದ ಈ ಆದೇಶ ಹೊರಡಿಸಲಾಗಿದೆ. ಶ್ರೀ ಜಿ. ಎಲ್. ರಾಮರೆಡ್ಡಿಯವರೇ ನೀಡಿರುವ ಪ್ರಮಾಣ ಪತ್ರಗಳ ಬಗ್ಗೆ ಪರಿಶೀಲಿಸಿ ಅವರೇ ನೈಜ ಪ್ರಮಾಣ ಪತ್ರ ಎಂದು ದೃಢೀಕರಿಸಿರುವ ಈ ಆದೇಶದ ಅನುಬಂಧದಲ್ಲಿರುವ 24 ಮಂದಿ ಗೋವಾ ವಿಮೋಚನಾ ಚಳುವಳಿ ಹೋರಾಟಗಾರರಿಗೆ ದಿನಾಂಕ: 1-4-94ರಿಂದ 19-4-1995ರವರೆಗೆ ಗೌರವಧನ ಬಾಕಿ ಹಣ ಪಾವತಿ ಮಾಡಲು ಹಾಗೂ ಅನುಬಂಧದಲ್ಲಿ ನಮೂದಿಸಿರುವ ಅರ್ಜಿದಾರರುಗಳ ಪೈಕಿ ಕೆಲವರು ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದು ಯೋಜನೆ ಹಿಂತೆಗೆದುಕೊಂಡ ದಿನಾಂಕದವರೆಗೆ ಅಂದರೆ ದಿನಾಂಕ: 19-4-95ರವರೆಗೆ ಗೌರವಧನ ಈಗಾಗಲೇ ಪಡೆದಿದ್ದಲ್ಲಿ ಅವರುಗಳನ್ನು ಹೊರತುಪಡಿಸಿ, ಉಳಿದವರಿಗೆ ಪಾವತಿ ಮಾಡಲು ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರಿಗೆ ಆದೇಶಿಸಿದೆ.

ಈ ವೆಚ್ಚವನ್ನು 2003-04ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "2235-60-107-01" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 9-10-2003ರಂದು ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1638 ವೆಚ್ಚ -5/ 2003ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ರಾಜಕೀಯ ವಿಶ್ರಾಂತಿ ವೇತನ).

**ದಿನಾಂಕ: 19-11-2003ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 119 ಪಿಎಫ್‌ಜಿ 2001ರ ಅನುಬಂಧ**

| ಕ್ರ. ಸಂ | ಹೆಸರು ಮತ್ತು ವಿಳಾಸ<br>**ಶ್ರೀ : ಶ್ರೀಮತಿ** | ಕಡತ ಸಂಖ್ಯೆ | ಪಿ. ಪಿ. ಓ. ಸಂಖ್ಯೆ |
|---|---|---|---|
| 1 | 2 | 3 | 4 |
| 1. | ಶೇಖ್ ಮಹಮದ್ ಬಿನ್ ಹೈದರ್ ಸಾಬ್ ಮನಿಯಾ, ಎಂಎಸ್‌ಕೆ ಮಿಲ್‌ರೋಡ್, ವಿದ್ಯಾನಗರ ಕಾಲೋನಿ, ಗುಲ್ಬರ್ಗಾ | ಡಿಪಿಎಆರ್ 355 ಪಿಪಿಜಿ 91<br>ಡಿಪಿಎಆರ್ 4 ಪಿಪಿಜಿ 2002 | 879 /FFWR / GLB |
| 2. | ಹನುಮಂತರಾವ್ ತಂದೆ ರಾಘವೇಂದ್ರರಾವ್, C/o ಕೇಶವಭಟ್ ಪೂಜಾರಿ, ಚಿತ್ತಾರಿ ಸಾ ಮಿಲ್ ಹಿಂಭಾಗ, ಜೇವರ್ಗಿ ರಸ್ತೆ, ಗುಲ್ಬರ್ಗಾ | ಡಿಪಿಎಆರ್ 1191 ಪಿಪಿಜಿ 92<br>ಡಿಪಿಎಆರ್ 5 ಪಿಪಿಜಿ 2002 | 948 / FFWR/ GLB |

| 1 | 2 | 3 | 4 |
|---|---|---|---|
| 3. | ಘನುಪೂಜಾರಿ ಬಿನ್ ಶಿವುನಾಯಕ್ ಗೋಲಾ ಸಿದ್ದ ಢಗಾ ತಾಂಡ ಸಾ: ಶಹಾಬಾದ, ತಾ: ಚಿತ್ತಾಪುರ, ಗುಲ್ಬರ್ಗಾ | ಡಿಪಿಎಆರ್ 1452 ಪಿಪಿಜಿ 92<br>ಡಿಪಿಎಆರ್ 13 ಪಿಪಿಜಿ 2002 | 1242 / FFWR/ GLB |
| 4. | ಶ್ಯಾಮರಾವ್ ಬಿನ್ ಮಲ್ಲಾರರಾವ್ ಕುಲಕರ್ಣಿ, ಬ್ರಹ್ಮಪೂರ, ಸುಭಾಷ್ ಚೌಕ್, C/o ಗುರುರಾಜ ಕಾಲೆ, ಗುಲ್ಬರ್ಗಾ | ಡಿಪಿಎಆರ್ 3229 ಪಿಪಿಜಿ 92<br>ಡಿಪಿಎಆರ್ 15 ಪಿಪಿಜಿ 2002 | 1223 / FFWR/ GLB |
| 5. | ಶೈಲಜ ಶ್ರೀನಿವಾಸನ್ ಕೋಂ ಶ್ರೀನಿವಾಸ ವೆಂಕಟೇಶ ಪದಿಕೆ, ನಂ. 394/ 4, 9ನೇ ಮೈನ್, 2ನೇ ಕ್ರಾಸ್, ಹನುಮಂತನಗರ, ಬೆಂಗಳೂರು -19 | ಡಿಪಿಎಆರ್ 42 ಪಿಪಿಜಿ 2002<br>ಡಿಪಿಎಆರ್ 2700 ಪಿಪಿಜಿ 92 | 2645 / FFWR/ BNG |
| 6. | ಗುಂಡಪ್ಪ ಬಿನ್ ಚನ್ನಬಸಪ್ಪ ಮುಕರಂಬಿ, ಮನೆ ನಂ. 3, 308, ಗಾಜೂರ, ಗುಲ್ಬರ್ಗಾ | ಡಿಪಿಎಆರ್ 26 ಪಿಪಿಜಿ 2003<br>ಡಿಪಿಎಆರ್ 3130 ಪಿಪಿಜಿ 92 | 1081 / FFWR/ GLB |
| 7. | ಶರಣಪ್ಪ ಬಿನ್ ಮಲ್ಲಪ್ಪ ಮುಗಟ ಸಾ: ಚಿತ್ತಾಪೂರ, ಗುಲ್ಬರ್ಗಾ | ಡಿಪಿಎಆರ್ 3249 ಪಿಪಿಜಿ 92<br>ಡಿಪಿಎಆರ್ 21 ಪಿಪಿಜಿ 2003 | 1048 / FFWR/ GLB |
| 8. | ಮಹದೇವಪ್ಪ ತಳವಾರ ಗುಡಿಕಟ್ಟೆ, ಬೈಲಹೊಂಗಲ, ಬೆಳಗಾವಿ | ಡಿಪಿಎಆರ್ 2963 ಪಿಪಿಜಿ 92<br>ಡಿಪಿಎಆರ್ 42 ಪಿಪಿಜಿ 2001 | 739 / FFWR/ BGM |
| 9. | ಚನ್ನಬಸಪ್ಪ ಬಿನ್ ಚಿಕ್ಕನಪ್ಪ, ಶಿಕಾರಿಪುರ, ಶಿವಮೊಗ್ಗ | ಡಿಪಿಎಆರ್ 2953 ಪಿಪಿಜಿ 92<br>ಡಿಪಿಎಆರ್ 14 ಪಿಪಿಜಿ 2001 | 1524 / FFWR/ SMG |
| 10. | ನಾಗಮ್ಮ ಕೋಂ ಹನುಮಂತರಾವ್, ಕೇರಾಫ್ ಎಸ್. ರಾಮಚಂದ್ರರಾವ್, ಚಿಕ್ಕಪೇಟೆ, ತುಮಕೂರು | ಡಿಪಿಎಆರ್ 19 ಪಿಪಿಜಿ 2001<br>ಡಿಪಿಎಆರ್ 2218 ಪಿಪಿಜಿ 92 | 1861 / FFWR/ TMK |
| 11. | ಬಿ. ರಾಮಪ್ಪ ಬಿನ್ ಗೋವಿಂದಪ್ಪ, ಹಿಮ್ಮತ್ ನಗರ, ಚಿತ್ರದುರ್ಗ | ಡಿಪಿಎಆರ್ 48 ಪಿಪಿಜಿ 98<br>ಡಿಪಿಎಆರ್ 2024 ಪಿಪಿಜಿ 92 | 1198 / FFWR/ CTR |
| 12. | ಸಿ. ಭುಜಂಗರಾವ್, ಕರ್ಜಾಡಿ ದೊಡ್ಡಮನೆ, ಅಲ್ಬಾಡಿ ಗ್ರಾಮ, ಆರ್ಡಿಫೋಸ್ಟ್, ಕುಂದಾಪುರ, ದಕ್ಷಿಣ ಕನ್ನಡ ಜಿಲ್ಲೆ. | ಡಿಪಿಎಆರ್ 32 ಪಿಪಿಜಿ 98<br>ಡಿಪಿಎಆರ್ 2025 ಪಿಪಿಜಿ 92 | 1202 / FFWR/ |
| 13. | ಬಿ. ಸೀತಾರಾಮಯ್ಯ, ರಾಮಾಂಜನೇಯ ಟ್ರೇಡರ್ಸ್, ಆರ್‌ಎಂಸಿ ಯಾರ್ಡ್, ಚಿತ್ರದುರ್ಗ | ಡಿಪಿಎಆರ್ 81 ಪಿಪಿಜಿ 98<br>ಡಿಪಿಎಆರ್ 1992 ಪಿಪಿಜಿ 92 | 1261 / FFWR/ CTR |
| 14. | ನಿಂಗಪ್ಪ ಚಂದ್ರಷಾ ಹಂಚಿನಾಳ, ದಕ್ಷಿಣ ಕೊಲ್ಲಾರ, ಅಫಜಲಪುರ, ಗುಲ್ಬರ್ಗಾ | ಡಿಪಿಎಆರ್ 32 ಪಿಪಿಜಿ 2003<br>ಡಿಪಿಎಆರ್ 1330 ಪಿಪಿಜಿ 92 | 911 / FFWR/ GLB |
| 15. | ಸಿದ್ರಾಮಪ್ಪ ತಂದೆ ಕಂಟಪ್ಪ, ಸೇಡಂ, ಗುಲ್ಬರ್ಗಾ (ಸಾವಲಗಿ) | ಡಿಪಿಎಆರ್ 30 ಪಿಪಿಜಿ 2003<br>ಡಿಪಿಎಆರ್ 4268 ಪಿಪಿಜಿ 92 | 1203 / FFWR/ GLB |
| 16. | ದೇವರಾಯ ತಂದೆ ಧರ್ಮರಾಯ, ಚಾಗಟೆ ಜಗತ್, ಗುಲ್ಬರ್ಗಾ | ಡಿಪಿಎಆರ್ 32 ಪಿಪಿಜಿ 2003<br>ಡಿಪಿಎಆರ್ 3602 ಪಿಪಿಜಿ 92 | -- |
| 17. | ಗೌರವರ್ತಿ ರಾಮಪ್ಪ ಬಿನ್ ಗೋವಿಂದಪ್ಪ ವಿನೋಬನಗರ, ಚಿತ್ರದುರ್ಗ | ಡಿಪಿಎಆರ್ 62 ಪಿಪಿಜಿ 98<br>ಡಿಪಿಎಆರ್ 2864 ಪಿಪಿಜಿ 92 | 1280 / FFWR/ CTR |
| 18. | ಗಂಗಾರಾಂ, ಟೈಲರ್ ಕಾವೇರಿ ಟೆಕ್ಸ್‌ಟೈಲ್, ಬಿ. ಡಿ. ರಸ್ತೆ, ಚಿತ್ರದುರ್ಗ | ಡಿಪಿಎಆರ್ 6 ಪಿಪಿಜಿ 2000<br>ಡಿಪಿಎಆರ್ 618 ಪಿಪಿಜಿ 92 | 1243 / FFWR/ CTR |
| 19. | ಧರ್ಮನಾಯಕ ಬಿನ್ ಡೊಂಗರು ಚವಾಣ್, ಗುಲ್ಬರ್ಗಾ | ಡಿಪಿಎಆರ್ 14 ಪಿಪಿಜಿ 2002<br>ಡಿಪಿಎಆರ್ 1451 ಪಿಪಿಜಿ 92 | 1273 / FFWR/ GLB |
| 20. | ಹನುಮಂತರಾವ್, ನಂ 344/ 3, 1ನೇ ಮುಖ್ಯ ರಸ್ತೆ, 2ನೇ ಕ್ರಾಸ್, ದೀಕ್ಷಿತ್ ರಸ್ತೆ, ದಾವಣಗೆರೆ | ಡಿಪಿಎಆರ್ 38 ಪಿಪಿಜಿ 2002<br>ಡಿಪಿಎಆರ್ 1766 ಪಿಪಿಜಿ 92 | 1194 / FFWR/ DVG |
| 21. | ದೇಶಪಾಂಡೆ ಕೇರಾಫ್ ವಿ. ಜಿ. ಪಾಟೀಲ್ ಮನೆ, ನಂ. 28, ಶಾಸ್ತ್ರಿ ನಗರ, ಬಿ. ಕೆ. ಕಾಂಗ್ರಾ, ಬೆಳಗಾವಿ | ಡಿಪಿಎಆರ್ 52 ಪಿಪಿಜಿ 99<br>ಡಿಪಿಎಆರ್ 3661 ಪಿಪಿಜಿ 92 | 7582 / FFWR/ BGM |
| 22. | ಸಂಜೀವರಾವ್, ನಂ. 161, ಪ್ರಿಯದರ್ಶಿನಿ, 6ನೇ ಮುಖ್ಯರಸ್ತೆ, ಆವಲಹಳ್ಳಿ, ಬಿ. ಡಿ. ಎ. ಬಡಾವಣೆ, ಬೆಂಗಳೂರು-85 | ಡಿಪಿಎಆರ್ 649 ಪಿಪಿಜಿ 92 (P) | 2304/ FFWR/ BNG |
| 23. | ರಾಜು, ನಂ 14, 3ನೇ ಮುಖ್ಯರಸ್ತೆ, ರಾಘವೇಂದ್ರ ಬಡಾವಣೆ, ಬೋರಯ್ಯ ನಿಲಯ, ಶ್ರೀನಗರ, ಬೆಂಗಳೂರು | ಡಿಪಿಎಆರ್ 896 ಪಿಪಿಜಿ 92 | -- |

| 1 | 2 | 3 | 4 |
|---|---|---|---|
| 23. | ಶ್ಯಾಂಸುಂದರ್ ತಂದೆ ಅದ್ವಾಚಾರ್ ಸವದಿ, ಬೆಂಗಳೂರು | ಡಿಪಿಎಆರ್ 33 ಪಿಪಿಜಿ 2003<br>ಡಿಪಿಎಆರ್ 213 ಪಿಪಿಜಿ 92 | 1657 / FFWR/ BNG |

**ಸಿ. ಕೃಷ್ಣಮೂರ್ತಿ**

ಪಿ. ಆರ್. 1483

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ರಾಜಕೀಯ ವಿಶ್ರಾಂತಿ ವೇತನ).

**ವಿಷಯ:** ಜಂಟಿ ಇಲಾಖಾ ವಿಚಾರಣೆ (1) ಓ. ಕಿಶನ್ ಚಂದ್ ಹಾಗೂ ವಿ.ವಿ. ಪುಣೇದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿಗಳ ವಿರುದ್ಧ ಮಂಡನಾಧಿಕಾರಿಯ ನೇಮಕ- ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 131 ಎಸ್‌ಇಎನ್ 2002, ದಿನಾಂಕ: 8-10-2003.

2. ಅಧೀನ ಕಾರ್ಯದರ್ಶಿ, ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಅವರ ಟಿಪ್ಪಣಿ ಸಂಖ್ಯೆ: 1774, ದಿನಾಂಕ: 21-10-2003.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಲಿಯಲ್ಲಿ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅಕ್ರಮ ನೇಮಕಾತಿ ಮಾಡಿದ ಆರೋಪಕ್ಕಾಗಿ ಓ. ಕಿಶನ್‌ಚಂದ್ ಹಾಗೂ ವಿ. ವಿ. ಪುಣೇದ್, ಕೆ. ಎ. ಎಸ್. (ಕಿರಿಯ ಶ್ರೇಣಿ) ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಯಿತು. ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋಧ್ಯಮ ಮತ್ತು ಯುವಜನ ಸೇವಾ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 21-10-2003ರ ಟಿಪ್ಪಣಿಯಲ್ಲಿ ಇಲಾಖೆಯಲ್ಲಿನ ಕೆಲಸದ ಒತ್ತಡದಿಂದ ಹಾಗೂ ಸಭೆಗಳಿಗೆ ಹಾಜರಾಗಬೇಕಾದ ಕಾರಣ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಆಗುತ್ತಿಲ್ಲ. ಮಧ್ಯಪಾನ ಸಂಯಮ ಮಂಡಲಿಗೆ ಪೂರ್ಣಾವಧಿ ಕಾರ್ಯದರ್ಶಿಯನ್ನು ನೇಮಕ ಮಾಡಿರುವುದರಿಂದ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 131 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 19ನೇ ನವೆಂಬರ್, 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 11 (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ದಿನಾಂಕ: 8-10-2003ರ ಆದೇಶವನ್ನು ಭಾಗಶಃ ಮಾರ್ಪಡಿಸಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಲಿ. ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ ಹಾಗೂ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಬೇಕೆಂದು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1484

**ಕೆ. ರಘುರಾಮ್‌ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಜೆ. ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರು, ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಎಸ್‌ಇಎನ್ 2003, ದಿನಾಂಕ: 12-6-2003.

2. ಶ್ರೀ ಜೆ. ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರ ವರದಿ ದಿನಾಂಕ: 16-10-2003.

**ಪ್ರಸ್ತಾವನೆ:**

ಶ್ರೀ ಎಸ್. ಆರ್. ಕೊಳವಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಅವರ ವಿರುದ್ಧದ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 12-6-2003ರ ಸರ್ಕಾರಿ ಆದೇಶದಲ್ಲಿ ಶ್ರೀ ಜೆ. ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ನಿವೃತ್ತ ನ್ಯಾಯಾಧೀಶರು ಮೇಲೆ (2)ರಲ್ಲಿ ಓದಲಾದ ದಿನಾಂಕ: 16-10-2003ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 12 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 19ನೇ ನವೆಂಬರ್, 2003**

ಸರ್ಕಾರವು ಶ್ರೀ ಜೆ. ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರು, ಇವರು ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿದ ವಿಚಾರಣಾ ವರದಿ ಸಲ್ಲಿಸಿದ ಕಾರಣ ಅವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24-4-1998 ರನ್ವಯ ರೂ. 5,000-00 (ಐದು ಸಾವಿರ ರೂಪಾಯಿಗಳು) ಮಾತ್ರ ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4-3-2002 ರನ್ವಯ ರೂ. 1,000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052-ಸಚಿವಾಲಯ ಸಾಮಾನ್ಯ ಸೇವೆಗಳು -090 ಸಚಿವಾಲಯ -01, ಕರ್ನಾಟಕ ಸರ್ಕಾರದ ಸಚಿವಾಲಯ -014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1485 **ಕೆ. ರಘುರಾಮ್‌ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಎಚ್. ಕೆ. ಗುಂಡೂರಾವ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ವೈ. ದೇವರಾಜ್, ಹಿರಿಯ ಸಹಾಯಕರು, ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಕ್ರಮಾಂಕ: ಸಿಆಸುಇ 77 ಎಸ್‌ಇಎನ್ 2002, ದಿನಾಂಕ: 29-10-2002.

2. ಶ್ರೀ ಎಚ್. ಕೆ. ಗುಂಡೂರಾವ್ ಮತ್ತು ಶ್ರೀ ವೈ. ದೇವರಾಜ್ ಅವರುಗಳ ಉತ್ತರ ದಿನಾಂಕ: 17-12-2002 ಮತ್ತು 16-12-2002.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿ, ಹಾಗೂ ಹಿರಿಯ ಸಹಾಯಕ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀಮತಿ ಜಮೀಲಾ ಬೇಗಂ, ಗೃಹ ವಿಜ್ಞಾನ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಅವರು ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ ವಿಚಾರಣೆ ನಡೆಸಿ ಪಡೆಯಲಾದ ವಿಚಾರಣಾ ವರದಿಯ ಮೇಲೆ ಯಾವುದೇ ಕ್ರಮ ಕೈಗೊಳ್ಳದೆ 17 ತಿಂಗಳುಗಳ ಕಾಲ ಕಡತವನ್ನು ಮೇಲಾಧಿಕಾರಿಗಳಿಗೆ ಸಲ್ಲಿಸದೆ ಶ್ರೀಮತಿ ಜಮೀಲಾ ಬೇಗಂರವರು ದಿನಾಂಕ: 30-4-2001ರಂದು ಸೇವೆಯಿಂದ ನಿವೃತ್ತರಾಗಿ ಸಿ.ಸಿ.ಎ. ನಿಯಮದಡಿಯಲ್ಲಿ ಯಾವುದೇ ದಂಡನೆ ವಿಧಿಸಲು ಸಾಧ್ಯವಾಗದೆ ದಂಡನೆಯಿಂದ ತಪ್ಪಿಸಿಕೊಳ್ಳಲು ಪರೋಕ್ಷವಾಗಿ ಅವಕಾಶ ಮಾಡಿ ಕೊಟ್ಟ ಆರೋಪಕ್ಕಾಗಿ ಶ್ರೀ ಎಚ್.ಕೆ. ಗುಂಡುರಾವ್, ಅಧೀನ ಕಾರ್ಯದರ್ಶಿ ಮತ್ತು ಶ್ರೀ ವೈ. ದೇವರಾಜ್, ಹಿರಿಯ ಸಹಾಯಕರು ಅವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 29-10-2002ರ ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟಿಸ್‌ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 17-12-2002 ಮತ್ತು 16-12-2002ರ ಉತ್ತರ ಸಲ್ಲಿಸಿದ ಆರೋಪಿಗಳು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆರೋಪಿತರುಗಳ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅವುಗಳು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ 11 (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಚ್.ಕೆ. ಗುಂಡೂರಾವ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ವೈ. ದೇವರಾಜ್ ಹಿರಿಯ ಸಹಾಯಕರು, ಕರ್ನಾಟಕ ಸರ್ಕಾರದ ಸಚಿವಾಲಯ ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ಮಾಡುವ ಸಲುವಾಗಿ ಶ್ರೀ ಬಿ. ರಂಗಸ್ವಾಮಿ ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 (5)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸರ್ಕಾರದ ಅಧೀನ ಕಾರ್ಯದರ್ಶಿ (ಕಾಲೇಜು ಶಿಕ್ಷಣ) ಶಿಕ್ಷಣ ಇಲಾಖೆ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ, ಉನ್ನತ ಶಿಕ್ಷಣ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1486 **ಕೆ. ರಘುರಾಮ್‌ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದಲ್ಲಿನ ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ದಿನಾಂಕ: 1-1-2004ರಿಂದ ದಿನಾಂಕ: 31-12-2004 ರವರೆಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 320 ಎಸ್‌ಜಿಬಿ 85 ದಿನಾಂಕ: 4-12-1985.

2. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 178 ಎಸ್‌ಜಿಬಿ 86 ದಿನಾಂಕ: 26-11-1986.

3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 94 ದಿನಾಂಕ: 14-7-1994.

4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 95 ದಿನಾಂಕ: 14-7-1995.

5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 99 ದಿನಾಂಕ: 5-6-2002.

6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 569 ಸಿಶಾಸೇ 92 ದಿನಾಂಕ: 30-11-1992.

7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 433 ಸಿಶಾಸೇ 94 ದಿನಾಂಕ: 3-12-1994
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 99 ದಿನಾಂಕ: 24-7-2002.
9. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2003 ದಿನಾಂಕ: 9-4-2003.
10. ಅನಧಿಕೃತ ಟಿಪ್ಪಣಿ ಸಂಖ್ಯೆ: ನೀಇ 91 ಸಿಎಎಂ 2003, ದಿನಾಂಕ: 30-6-2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿಯ ಸರ್ಕಾರದ ಆದೇಶದಲ್ಲಿ ಸಚಿವಾಲಯದ ಲೋಕೋಪಯೋಗಿ ಮತ್ತು ವಿದ್ಯುಚ್ಛಕ್ತಿ ಇಲಾಖೆಯ ಕಾಡಾ ವಿಭಾಗದಲ್ಲಿ ಈ ಕೆಳಕಂಡ ಹೆಚ್ಚುವರಿ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿತ್ತು.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | ಒಂದು ಹುದ್ದೆ |
| 2. | ಸಹಾಯಕ ಸಾಂಖ್ಯಿಕ ಅಧಿಕಾರಿ | ಒಂದು ಹುದ್ದೆ |
| 3. | ಸಹಾಯಕ | ಒಂದು ಹುದ್ದೆ |
| 4. | ಬೆರಳಚ್ಚುಗಾರ | ಒಂದು ಹುದ್ದೆ |
| | **ಒಟ್ಟು** | **ನಾಲ್ಕು ಹುದ್ದೆಗಳು** |

ಮೇಲ್ಕಂಡ ಹುದ್ದೆಗಳನ್ನು ಕಾಲಾನುಕಾಲಕ್ಕೆ ಮುಂದುವರೆಸುತ್ತಾ, ಕ್ರಮ ಸಂಖ್ಯೆ (5)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 31-12-2002ರವರೆಗೆ ಮುಂದುವರೆಸಲಾಗಿದೆ.

ಕ್ರಮಸಂಖ್ಯೆ (6)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 1-4-1992 ರಿಂದ 2 ವರ್ಷಗಳ ಅವಧಿಗೆ ಹಾಗೂ ಕ್ರಮ ಸಂಖ್ಯೆ (7)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 1-4-1994 ರಿಂದ ದಿನಾಂಕ: 31-3-1995 ರವರೆಗೆ ಮುಂದುವರಿಸಲಾಗಿದೆ.

| | | |
|---|---|---|
| 1. | ಶಾಖಾಧಿಕಾರಿ | ಒಂದು ಹುದ್ದೆ |
| 2. | ಹಿರಿಯ ಸಹಾಯಕ | ಒಂದು ಹುದ್ದೆ |
| 3. | ಶೀಘ್ರಲಿಪಿಗಾರ | ಒಂದು ಹುದ್ದೆ |
| 4. | ಕಿರಿಯ ಸಹಾಯಕ | ಒಂದು ಹುದ್ದೆ |
| 5. | ಬೆರಳಚ್ಚುಗಾರ | ಒಂದು ಹುದ್ದೆ |
| 6. | ದಲಾಯತ್ | ಎರಡು ಹುದ್ದೆಗಳು |
| | **ಒಟ್ಟು** | **ಏಳು ಹುದ್ದೆಗಳು** |

ಮೇಲ್ಕಂಡ ಹುದ್ದೆಗಳನ್ನು ಕ್ರಮಸಂಖ್ಯೆ (9)ರಲ್ಲಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 31-12-2003ರವರೆಗೆ ಮುಂದುವರೆಸಲಾಗಿರುತ್ತದೆ.

ಸದರಿ ಹುದ್ದೆಗಳನ್ನು ಖಾಯಂಗೊಳಿಸಲು ಕ್ರಮಸಂಖ್ಯೆ (10)ರಲ್ಲಿರುವ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯು ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2003, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2003**

ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 1-1-2004 ರಿಂದ ದಿನಾಂಕ: 31-12-2004ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | ಒಂದು ಹುದ್ದೆ |
| 2. | ಸಹಾಯಕ ಸಾಂಖ್ಯಿಕ ಅಧಿಕಾರಿ | ಒಂದು ಹುದ್ದೆ |
| 3. | ಸಹಾಯಕ | ಒಂದು ಹುದ್ದೆ |
| 4. | ಬೆರಳಚ್ಚುಗಾರ | ಒಂದು ಹುದ್ದೆ |
| 5. | ಶಾಖಾಧಿಕಾರಿ | ಒಂದು ಹುದ್ದೆ |
| 6. | ಹಿರಿಯ ಸಹಾಯಕ | ಒಂದು ಹುದ್ದೆ |
| 7. | ಶೀಘ್ರಲಿಪಿಗಾರ | ಒಂದು ಹುದ್ದೆ |
| 8. | ಕಿರಿಯ ಸಹಾಯಕ | ಒಂದು ಹುದ್ದೆ |
| 9. | ಬೆರಳಚ್ಚುಗಾರ | ಒಂದು ಹುದ್ದೆ |
| 10. | ದಲಾಯತ್ | ಎರಡು ಹುದ್ದೆಗಳು |
| | **ಒಟ್ಟು** | **ಹನ್ನೊಂದು ಹುದ್ದೆಗಳು** |

ಸದರಿ ಸರ್ಕಾರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10-7-1996ರಲ್ಲಿ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1487

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).